



ನ್ಯಾಯಮೂರ್ತಿ

# ಲೋಕೂರ ನಾರಾಯಣರಾಯರು

ಮುಂಬಯಿ ಕರ್ನಾಟಕ ಸಂಘದ ಪ್ರಕಟನೆ

೧

ನ್ಯಾಯಮೂರ್ತಿ

# ಲೋಕೂರ ನಾರಾಯಣರಾಯರು

ಪರಿಚಯಕಾರರು

ಎಸ್. ಕೆ. ಕುಲಕರ್ಣಿ ಮತ್ತು ಎಚ್. ವ್ಹಿ. ಇಮಾರತಿ




ಕರ್ನಾಟಕ ಸಂಘ

೧೯೪೭ ಮುಂಬಯಿ ಬೆಲೆ ೧—೮—೦

ಕರ್ನಾಟಕ ಸಂಘದ ಪ್ರಕಟನಾ ಶಾಖೆಯ ಸದಸ್ಯರು

ಅಧ್ಯಕ್ಷ

ಪ್ರೊ. ವಿ. ಎಂ. ಇನಾಂದಾರ

ಶ್ರೀ. ಕೃಷ್ಣಕುಮಾರ ಶ್ರೀ. ಎನ್. ಕೆ. ಕುಲಕರ್ಣಿ

ಶ್ರೀ. ಬಿ. ಡಿ. ಬೆಳವಿ

ಕಾರ್ಯದರ್ಶಿ:

ಶ್ರೀ. ಸಾಂಗಲಿ ವೆಂಕಟೇಶ



ಪ್ರಕಾಶಕರು:

ಕರ್ನಾಟಕ ಸಂಘ, ಮುಂಬಯಿ

ಸಂಝುಗಿರಿ ಸದನ, ಗಿರಿಗಾಂವ, ಮುಂಬಯಿ



ಪ್ರಥಮ ಮುದ್ರಣ—೧೦೦೦ ಪ್ರತಿಗಳು

ಎಪ್ರಿಲ್ ೧೯೪೭



ಮುದ್ರಕರು:

ಜಿ. ಸಿ. ಅವಿೂನ್, ನ್ಯಾಶನಲ್ ಪ್ರಿಂಟರ್ಸ್ ಆ್ಯಂಡ್ ಎಡ್ವರ್ಟಾಯಿಜರ್ಸ್

೮೩-೮೫, ಫೋರ್ಗಾ ಸ್ಟ್ರೀಟ್, ಕೋಟೆ, ಮುಂಬಯಿ

# ಅರಿಕೆ

ಮುಂಬಯಿ ಕರ್ನಾಟಕ ಸಂಘದವರು ಪ್ರಕಟನಾ ಶಾಖೆಯೊಂದನ್ನು ನಡಸಿಕೊಂಡು ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಸಂಬಂಧಪಟ್ಟ ಪುಸ್ತಕಗಳನ್ನು ಸಾಧ್ಯವಾದಾಗ ಪ್ರಕಟಿಸಬೇಕು ಎಂದು ಬಹುಕಾಲ ಯೋಚಿಸಿದರು. ಯುದ್ಧದ ಪರಿಸ್ಥಿತಿಯ ಮೂಲಕ, ಇತರ ಅನಾನುಕೂಲಗಳ ಮೂಲಕ ಆ ಕೆಲಸ ಇದುವರೆಗೆ ಆಗಿರಲಿಲ್ಲ. ಇದೀಗ ಆ ಕೆಲಸವನ್ನು ಕೈಕೊಂಡಿದೆ. **ನ್ಯಾಯಮೂರ್ತಿ ಲೋಕೂರ ನಾರಾಯಣರಾಯ**ರ ಪರಿಚಯದ ಈ ಪುಸ್ತಕವೇ ಸಂಘದ ಮೊದಲನೆಯ ಪ್ರಕಟನೆ.

ಶ್ರೀಯುತ ಲೋಕೂರ ನಾರಾಯಣರಾಯರು ಕೀರ್ತಿವಂತ ಕನ್ನಡಿಗರು. ವ್ಯಾಸಂಗದಿಂದಲೂ ಪರಿಶ್ರಮದಿಂದಲೂ ಉನ್ನತ ಪದವಿಗೇರಿದವರು. ಬಗೆಬಗೆಯಾಗಿ ಸಾರ್ವಜನಿಕ ಜೀವನದಲ್ಲಿ ಬೆರೆತು ಕೆಲಸಮಾಡಿದವರು. ಕರ್ನಾಟಕ ಸಂಘ ಅವರ ನೇತೃತ್ವದಲ್ಲಿ ಬಲಗೊಂಡಿದೆ. ಈಗ ಅವರು ನಿವೃತ್ತರಾಗಿ ಮುಂಬಯಿಯಿಂದ ತೆರಳುವವರಾಗಿದ್ದಾಗ, ಮುಂಬಯಿ ಸಂಯುಕ್ತ ಕರ್ನಾಟಕ ಸಂಘದ ಪರವಾಗಿ ಏರ್ಪಟ್ಟ ಅವರ ಅರುವತ್ತೊಂದನೆಯ ಹುಟ್ಟು ಹಬ್ಬದ ಸಮಾರಂಭದ ಸಮಯದಲ್ಲಿ ಕರ್ನಾಟಕ ಸಂಘವು ತನ್ನ ಮೊದಲ ಪ್ರಕಟನೆಯನ್ನು ಅವರಿಗಾಗಿ ಮೀಸಲಿಟ್ಟು ತನ್ನ ಗೌರವದ ಕಾಣಿಕೆಯನ್ನು ಸಲ್ಲಿಸುತ್ತಿರುವುದು ಸರಿಯೇ.

ಈ ಚಿಕ್ಕ ಪುಸ್ತಕ ಓದುಗರ ಕೈಯಲ್ಲಿಯೇ ಇರುವಾಗ ಅದನ್ನು ಕುರಿತು ಏನನ್ನು ಹೇಳಿದರೂ ಅಪ್ರಸ್ತುತವಾದೀತು. ಆದರೂ ಒಂದೆರಡು ಮಾತುಗಳನ್ನು ಓದುಗರೆದುರು ಇಡುವುದು ಅಗತ್ಯ. ನೂರಾರು ಅನಾನುಕೂಲಗಳ ಮಧ್ಯದಲ್ಲಿ ನಿಯಮಿತವಾದ ಕಾಲಾವಧಿಯಲ್ಲಿ ಪುಸ್ತಕದ ಯೋಜನೆ ಕೈಗೂಡಬೇಕಾಯಿತು. ಪುಟಗಳ ಸಂಖ್ಯೆಯನ್ನು ಮಿತವಾಗಿರಿಸಿಕೊಂಡಾಯಿತು. ಆದುದರಿಂದ ಈ ಪರಿಚಯ ಗ್ರಂಥ

ಓದುಗರಿಗೆ ತೀರ ಚಿಕ್ಕದು ಎನಿಸಿದರೆ ಅವರು ಮೇಲಿನ ಕಾರಣಗಳನ್ನು ಮನ್ನಿಸಬೇಕು. ಈ ಮಿತಿಯಲ್ಲಿ ಸಾಧ್ಯವಾದ ಪರಿಚಯವಾದರೂ ಅವಶ್ಯವಾದಷ್ಟು ವಿಸ್ತಾರವನ್ನು ಪಡೆಯಲಾಗಲಿಲ್ಲ. ಆದುದರಿಂದಲೇ ಹೆಚ್ಚಾಗಿ ಇಲ್ಲಿಯ ಪರಿಚಯ ಶ್ರೀ. ಲೋಕೂರರವರ ಸಾರ್ವಜನಿಕ ಜೀವನಕ್ಕೆ ಸಂಬಂಧಪಟ್ಟದ್ದಾಗಿದೆ. ಅವರು ಪಡೆದ ಯಶಸ್ಸು, ಗಳಿಸಿದ ಶ್ರೇಯಸ್ಸು ಇವುಗಳನ್ನು ಎತ್ತಿತೋರಿಸುವ ಗೌರವದ ಕಾಣಿಕೆಯಾಗಿದೆ. ಈ ಇತಿಮಿತಿಗಳಲ್ಲಿ ಇನ್ನೂ ಹೆಚ್ಚು ಕೂಲಂಕಷವಾದ, ಅಂತರಂಗದರ್ಶಿಯಾದ ಜೀವನದರ್ಶನ ಸಾಧ್ಯವಿರಲಿಲ್ಲ. ಆದರೂ ಸಂಘದ ಕಾರ್ಯದರ್ಶಿಗಳಾದ ಶ್ರೀ. ಇಮಾರತಿ ಹನುಮಂತರಾಯರು ಶ್ರೀ. ಎನ್. ಕೆ. ಕುಲಕರ್ಣಿಯವರೊಡನೆ ಸಹಕರಿಸಿ ಇಷ್ಟನ್ನಾದರೂ ಸಕಾಲಕ್ಕೊದಗುವಂತೆ ಸಾಧ್ಯಮಾಡಿದುದಕ್ಕಾಗಿ ಪ್ರಕಟನಾ ಶಾಖೆಯವರು ಇವರೀರ್ವರಿಗೂ ಕೃತಜ್ಞರಾಗಿದ್ದಾರೆ. ಸಂಘದ ಉಪಾಧ್ಯಕ್ಷರಾದ ಶ್ರೀ. ಜಹಾಗೀರದಾರ ರಂಗಾಚಾರ್ಯರು ಈ ಪರಿಚಯ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದು ಉಪಕಾರ ಮಾಡಿದ್ದಾರೆ. ಅಲ್ಪಾವಧಿಯಲ್ಲಿ ಪುಸ್ತಕವನ್ನು ಅಂದವಾಗಿ ಅಚ್ಚುಮಾಡಿಕೊಟ್ಟ ನ್ಯಾಶನಲ್ ಪ್ರಿಂಟರ್ಸ್ ಆ್ಯಂಡ್ ಎಡ್ವರ್ಟಾಯಿಜರ್ಸ್ ಅವರಿಗೆ ತುಂಬ ಋಣಿಯಾಗಿರಬೇಕಾಗಿದೆ.

**ವಿ. ಎಂ. ಇನಾಂದಾರ,**
ಅಧ್ಯಕ್ಷ, ಪ್ರಕಟನಾ ಶಾಖೆ,
ಕರ್ನಾಟಕ ಸಂಘ, ಮುಂಬಯಿ.

೧೯-೪-೧೯೪೭



# ಮುನ್ನುಡಿ

ನ್ಯಾಯಮೂರ್ತಿ ಲೋಕೂರ ನಾರಾಯಣರಾಯರ ೬೧ನೆಯ ಹುಟ್ಟು ಹಬ್ಬದ ನಿಮಿತ್ತವಾಗಿ ಪ್ರಕಟವಾಗುತ್ತಿರುವ ಈ ಗ್ರಂಥಕ್ಕೆ ನಾನು ಮುನ್ನುಡಿಯನ್ನು ಬರೆಯಬೇಕೆಂದು ಪ್ರಕಾಶಕರು ಕೇಳಿದ್ದಾರೆ. ಶ್ರೀಯುತರಾದ ಎನ್. ಕೆ. ಕುಲಕರ್ಣಿ ಮತ್ತು ಎಚ್. ವ್ಹಿ. ಇಮಾರತಿಯವರು ಲೋಕಪ್ರಿಯವಾಗುವಂತೆ ಬರೆದ ಚರಿತ್ರೆಗೆ ಮುನ್ನುಡಿ ಎಂಬ ಈ ಕನ್ನಡಿಯನ್ನು ನಾನು ಹಿಡಿಯುವದು ಅವಶ್ಯವಿದೆಯೋ ಎಂದು ನಾನು ನನ್ನನ್ನೇ ಅನೇಕ ಸಲ ಕೇಳಿಕೊಂಡೆ. ಕೊನೆಗೆ ಒಪ್ಪಿದೆ. ನನ್ನ ವ್ಯವಸಾಯದಲ್ಲಿ ಮತ್ತು ಸಾರ್ವಜನಿಕ ಕೆಲಸದಲ್ಲಿ ಅನೇಕ ವರ್ಷಗಳ ವರೆಗೆ ಶ್ರೀ. ಲೋಕೂರರು ಮತ್ತು ನಾನು ಕೂಡಿ ಕೆಲಸ ಮಾಡಿದ್ದೇವೆ. ಇಂದು ಅವರ ೬೧ನೇ ವರ್ಷದ ಹುಟ್ಟು ಹಬ್ಬದ ನಿಮಿತ್ತವಾಗಿ ಅವರು ನಮ್ಮ ನಾಡಿಗೆ ಮತ್ತು ನಾಡಿನ ಜನಕ್ಕೆ ಸಲ್ಲಿಸಿದ ಅಮೌಲ್ಯ ಸೇವೆಗಾಗಿ ನನ್ನ ವೈಯಕ್ತಿಕ ಅಭಿನಂದನೆ ಮತ್ತು ಅಭಿವಂದನೆಗಳನ್ನು ಸಲ್ಲಿಸಲು ಇದೊಂದು ತಾನಾಗಿಯೇ ಬಂದ ಸುಸಂಧಿಯೆಂದು ಬಗೆದು ಈ ಮುನ್ನುಡಿಯನ್ನು ಬರೆಯಲು ಒಪ್ಪಿದ್ದೇನೆ.

ಶ್ರೀ. ಲೋಕೂರರು ೬೦ನೇ ವರ್ಷವನ್ನು ದಾಟಿದರೆಂಬ ಸಂಗತಿಯನ್ನು ಅನೇಕ ಸಲ ಹೇಳಬೇಕಾಗುತ್ತದೆ. ಅವರ ವ್ಯಕ್ತಿತ್ವ, ಆರೋಗ್ಯ ಮತ್ತು ಅವರ ಚಟುವಟಿಕೆಗಳನ್ನು ನೋಡಿದರೆ ಅವರು ಅಷ್ಟೊಂದು ವಯಸ್ಸಿನವರೆಂದು ಅನಿಸುವದಿಲ್ಲ. ೬೦ ವರ್ಷಗಳಾದ ನಿಮಿತ್ತವಾಗಿ ಜರಗುತ್ತಿರುವ ಅವರ ಸನ್ಮಾನಗಳನ್ನು ನೋಡಿಯೇ ಆ ಮಾತಿನಲ್ಲಿ ವಿಶ್ವಾಸವಾಗುತ್ತದೆ. ತರುಣರನ್ನು ನಾಚಿಸುವಂತೆ ಕೆಲಸಮಾಡುವ ಶಾರೀರಕ ಮತ್ತು ಭೌದ್ಧಿಕ ಬಲ ೬೧ನೇ ವಯಸ್ಸಿನಲ್ಲಿ ಕೂಡಾ ಅವರಲ್ಲಿ ಇದೆ. ಅದಕ್ಕಾಗಿಯೇ ಮುಂಬಯಿ ಹಾಯಕೋರ್ಟದ ಮುಖ್ಯ ನ್ಯಾಯಾಧೀಶರಿಗೆ ಶ್ರೀ. ಲೋಕೂರರು ನಿವೃತ್ತರಾಗುವಾಗ್ಗೆ ಬಹಳ ವ್ಯಸನವಾಗಿ '೬೦ನೆಯ ವಯಸ್ಸು ಮುಟ್ಟಿದ ಕೂಡಲೇ ನ್ಯಾಯಾಧೀಶರು ನಿವೃತ್ತರಾಗುವ ಈ ಪದ್ಧತಿ ಬಹಳ ಅನ್ಯಾಯವಾದದ್ದು' ಎಂದು ಹೇಳಿದರು.

"To be Seventy years **Young** is sometimes far more cheerful and hopeful than to be forty years **Old**" ಎಂದು Holmes ಅವರು ಒಂದೆಡೆ ಹೇಳಿದ್ದು ಶ್ರೀ. ಲೋಕೂರರಿಗೆ ಸಂಪೂರ್ಣವಾಗಿ ಅನ್ವಯಿಸುತ್ತದೆ.

ಶ್ರೀ. ಲೋಕೂರರ ಚರಿತ್ರೆಯನ್ನು ಲೇಖಕರು ಅತ್ಯಂತ ವಾಸ್ತವಿಕವಾಗಿ ಮತ್ತು ಪ್ರಾಮಾಣಿಕವಾಗಿ ನಿವೇದಿಸಿದ್ದಾರೆ. ಹೆಚ್ಚು ವಿಸ್ತೃತವಾಗಿದ್ದರೆ ಒಳಿತಾಗುತ್ತಿದ್ದರೂ ವೇಳೆಯ ಅಭಾವದ ಮೂಲಕ ಅದು ಸಾಧ್ಯವಾಗಲಿಲ್ಲವೆಂದು ತೋರುತ್ತದೆ. ಆದರೂ ಅವರು ಮಾಡಿದ ಈ ಪ್ರಯತ್ನವು ಬಹಳ ಉಪಯುಕ್ತವಾಗಿದೆ. ನಾನು ಅವರ ಚರಿತ್ರೆಯ ವಿಷಯವಾಗಿ ಏನನ್ನು ಬರೆಯುವುದಿಲ್ಲ. ಏಕಂದರೆ ಮುಂದಿನ ಪುಟಗಳು ಅವರ ಚರಿತ್ರೆಯನ್ನು ನಾನು ಹೇಳುವದಕ್ಕಿಂತ ಸರಸವಾಗಿ ಹೇಳುವವು.

ನನಗೂ ಶ್ರೀ. ಲೋಕೂರರಿಗೂ ಒಂದೇ ಅಪ ಕಾರ್ಯಕ್ಷೇತ್ರವು ಹಾಯಕೋರ್ಟು. ಅಂದಮೇಲೆ ಹಾಯಕೋರ್ಟದಲ್ಲಿಯ ಶ್ರೀ. ಲೋಕೂರರ ಕಾರ್ಯದ ಬಗ್ಗೆ ಸ್ವಲ್ಪ ನಾನು ಹೇಳಬೇಕೆಂಬುದು ಸ್ವಾಭಾವಿಕವಾಗಿದೆ. ಆದರೆ ಹಾಯಕೋರ್ಟದಲ್ಲಿಯ ಶ್ರೀ. ಲೋಕೂರರ ಕಾರ್ಯವು ಬಹು ಸಂಖ್ಯಾಕರಿಗೆ ಚನ್ನಾಗಿ ಗೊತ್ತೇ ಇದೆ. ಅವರ ಸಹಿಷ್ಣುತೆ, ಹೊಸ ವಕೀಲರಿಗಾಗಿ ಅವರು ತೋರಿಸುವ ಉದಾರ ಮತ್ತು ಶಾಂತವೃತ್ತಿ, ಅವರ ನಿಷ್ಪಕ್ಷಪಾತ ನ್ಯಾಯದಾನ, ಹಾಯಕೋರ್ಟದಲ್ಲಿಯ ಅವರ ಅತ್ಯಂತ ಸುವ್ಯವಸ್ಥಿತವಾದ ಆಡಳಿತೆ, ಇವುಗಳು ಜನರ ಬಾಯಲ್ಲಿಯ ಮಾತುಗಳಾಗಿವೆ. ಕಾಯದೆಯಲ್ಲಿಯ ಅವರ ವಿದ್ವತ್ತೆಗೆ ಮುಖ್ಯನ್ಯಾಯಾಧೀಶರ–"He is my master in criminal law" ಎಂಬ ಮಾತುಗಳೇ ನಿದರ್ಶಕವಾಗಿವೆ. ನನಗೆ ಹಾಯಕೋರ್ಟದ ೩೨ ವರ್ಷಗಳ ಸಂಬಂಧವಿದೆ. ಅಷ್ಟೊಂದು ದೀರ್ಘ ಅವಧಿಯಲ್ಲಿ ಶ್ರೀ. ಲೋಕೂರರಷ್ಟು ಲೋಕಪ್ರಿಯ ನ್ಯಾಯಾಧೀಶರು ಒಬ್ಬರೂ ಆಗಿ ಹೋಗಿಲ್ಲವೆಂದು ನಾನು ಧಾರಾಳವಾಗಿ ಹೇಳಬಹುದು.

ಶ್ರೀ. ಲೋಕೂರರು ಕೇವಲ ಹಾಯಕೋರ್ಟ ಜಜ್ಜರಾದರೆಂದು ಇಷ್ಟೊಂದು ಲೋಕಪ್ರಿಯರಾಗಿಲ್ಲ. ಹಾಯಕೋರ್ಟ ಜಜ್ಜರಾದರೂ ಒಬ್ಬ ಸಾಮಾನ್ಯ ಪುರುಷನಂತೆಯೇ ಇರುವ ಅವರ ವರ್ತನೆ ಅವರನ್ನು ಲೋಕಪ್ರಿಯರನ್ನಾಗಿ ಮಾಡಿತು. ಕಿರಿಯರಲ್ಲಿ ಕಿರಿಯರಾಗಿಯೂ ಹಿರಿಯರಲ್ಲಿ ಹಿರಿಯರಾಗಿಯೂ ಹೋಗುವ ಒಂದು ಹಿರಿಗುಣವು ಶ್ರೀ. ಲೋಕೂರರಲ್ಲಿ ಮನೆಮಾಡಿಕೊಂಡಿದೆ. ಅವರಿಗೆ ಹೇಗೆ ಹಿರಿಕಿರಿಯರೆಂಬ ಭೇದವಿಲ್ಲವೋ ಹಾಗೆಯೇ ಸಣ್ಣ ಮತ್ತು ದೊಡ್ಡಕೆಲಸಗಳೆಂಬ ಭೇದಗಳಿಲ್ಲ. ಎಲ್ಲ ಕೆಲಸಗಳಿಗೆ ಅವರು ತಮ್ಮ ಬೆಂಬಲ ಕೊಡುವರು. ಹಾಯಕೋರ್ಟ ಜಜ್ಜರಂತಹ ದೊಡ್ಡ ಸ್ಥಾನದಲ್ಲಿದ್ದು ಇಷ್ಟೊಂದು ಸಣ್ಣ ದೊಡ್ಡ ಸಾರ್ವಜನಿಕ ಕಾರ್ಯಗಳನ್ನು ಮನಸ್ಸಿನಿಂದ ಯಶಸ್ವಿಯಾಗಿ ಮಾಡಿದವರು ಬಹಳ ಕಡಿಮೆ.

ಶ್ರೀ. ಲೋಕೂರರ ಲೋಕಪ್ರಿಯತೆಗೆ ಇನ್ನೊಂದು ದೊಡ್ಡ ಕಾರಣವಿದೆ. ಅವರು ಅತ್ಯಂತ ಶ್ರೇಷ್ಠ ಸ್ಥಾನವನ್ನು ಅಲಂಕರಿಸಿದರೂ ತಮ್ಮ ಜನ ಮತ್ತು ನಾಡನ್ನು ಅವರು ಮರೆಯಲಿಲ್ಲ; ಅಷ್ಟೇ ಅಲ್ಲ ಆ ಸ್ಥಾನದ ಉಪಯೋಗವನ್ನು ತಮ್ಮ ಜನ ಮತ್ತು ನಾಡನ್ನು ಮೇಲೆತ್ತಲು ಮಾಡಿಕೊಂಡರು. ಪ್ರಾಂತದ ರಾಜಧಾನಿಯಾದ ಮುಂಬಯಿಯಲ್ಲಿದ್ದುಕೊಂಡು ಕನ್ನಡನಾಡಿನ ಅನೇಕ ಸಮಸ್ಯೆಗಳು ಫಲಕಾರಿಯಾಗಿ ಬಗೆಹರಿಯುವಂತೆ ಶ್ರೀ. ಲೋಕೂರರು ವ್ಯಕ್ತವಾಗಿ ಮತ್ತು ಅವ್ಯಕ್ತವಾಗಿ ಪ್ರಯತ್ನಮಾಡಿದ್ದಾರೆ. ಶ್ರೀ. ಲೋಕೂರರ ಪರಿಶ್ರಮದ ಫಲವಾಗಿ ಇಂದು ಅನೇಕ ಕನ್ನಡಿಗರು ದೊಡ್ಡದೊಡ್ಡ ಸ್ಥಾನಗಳಲ್ಲಿರುವರು. ಕನ್ನಡಿಗರಿಗೆ ಅವರ ಹಕ್ಕುಗಳನ್ನು ಪಡೆಯಲು ಅವರು ನೆರವಾಗಿದ್ದಾರೆ. ನೆರವಿಗಾಗಿ ತಮ್ಮೆಡೆಗೆ ಬಂದ ಕನ್ನಡಿಗರಿಗೆ ರಿಕ್ತಹಸ್ತದಿಂದ ಕಳಿಸುವದು ಶ್ರೀ. ಲೋಕೂರರ ಸ್ವಭಾವವಲ್ಲ. ಶ್ರೀ. ಲೋಕೂರ ಅವರ ಸ್ಥಾನದ ಪ್ರಭಾವದಿಂದ ಸಾವಿರಾರು ಕನ್ನಡಿಗರು ಉಪಕೃತರಾಗಿದ್ದಾರೆ. "We do not count a man's years until he has nothing else to count" ಎಂದು Emersonನು ಹೇಳಿದ್ದಾನೆ. ಶ್ರೀ. ಲೋಕೂರರು ಮಾಡಿದ್ದ ಹಲವು ಸತ್ಕಾರ್ಯಗಳ

ಎಣಿಕೆಮಾಡಿ ಅವರ ೬೧ನೆಯ ಹುಟ್ಟು ಹಬ್ಬವನ್ನು ಇಂದು ನಾವು ಅತ್ಯಂತ ಆದರದಿಂದ ಮತ್ತು ಅಭಿಮಾನದಿಂದ ನೆರವೇರಿಸುತ್ತಿದ್ದೇವೆ.

ಶ್ರೀ. ಲೋಕೂರರು ಈಗ ದಕ್ಷಿಣ ಸಂಸ್ಥಾನಗಳ ಅಂದರೆ ಉತ್ತರ ಕರ್ನಾಟಕಸಂಸ್ಥಾನಗಳನ್ಯಾಯಾಲಯದಲ್ಲಿ ನ್ಯಾಯಾಧೀಶರಾಗಿದ್ದಾರೆ. ಕೊಲ್ಹಾಪುರದಲ್ಲಿದ್ದುಕೊಂಡು ಅವರು ಕನ್ನಡ ನಾಡಿಗೆ ಅನುಪಮವಾದ ಸೇವೆ ಸಲ್ಲಿಸಬಹುದಾಗಿದೆ. ಇಂದಿನ ಸಂಕ್ರಮಣ ಕಾಲದಲ್ಲಿ ಅವರು ಗಡಿನಾಡಾದ ಕೊಲ್ಹಾಪುರದಲ್ಲಿ ಹೋಗಿರುವದು ಕನ್ನಡ ನಾಡಿನ ಸೌಭಾಗ್ಯವೆಂದೇ ನಾನು ತಿಳಿಯುತ್ತೇನೆ. ಉತ್ತರ ಕರ್ನಾಟಕ ಸಂಸ್ಥಾನಗಳ ಕನ್ನಡಿಗರ ಹಿತವು ಅವರ ಕೈಯಲ್ಲಿ ಸುರಕ್ಷಿತವಾಗಿ ಇರುತ್ತದೆಂಬದರಲ್ಲಿ ಸಂಶಯವಿಲ್ಲ.

ಈ ಮುನ್ನುಡಿಯನ್ನು ಬರೆಯುತ್ತಿರುವಾಗಲೇ ಶ್ರೀ. ಲೋಕೂರರು ಕರ್ನಾಟಕ ಯುನಿವ್ಹರ್ಸಿಟಿ ಕಮಿಶನದ ಅಧ್ಯಕ್ಷರಾಗಿ ನೇಮಿತರಾಗಿದ್ದಾರೆಂದು ತಿಳಿದು ಬಂದಿದೆ. ಇದೊಂದು ಕನ್ನಡಿಗರಿಗೆ ದೊಡ್ಡ ಅಭಿಮಾನದ ಸಂಗತಿ. ಕರ್ನಾಟಕ ಯುನಿವ್ಹರ್ಸಿಟಿಗಾಗಿ ಕನ್ನಡಿಗರು ಎಷ್ಟೊಂದು ಆತುರರಾಗಿದ್ದಾರೆಂಬದನ್ನು ಬೇರೆ ಹೇಳಲು ಬೇಡ. ಶ್ರೀ. ಲೋಕೂರರ ಅಧ್ಯಕ್ಷತೆಯಲ್ಲಿ ನೇಮಿತವಾದ ಈ ಸಮಿತಿಯು ಕನ್ನಡಿಗರ ಒಂದು ದೊಡ್ಡ ಕನಸನ್ನು ಬೇಗನೇ ನಿಜವನ್ನಾಗಿ ಮಾಡುವದೆಂಬ ವಿಶ್ವಾಸ ನನಗಿದೆ.

ದೇವರು ಶ್ರೀ. ಲೋಕೂರರಿಗೆ ಆಯುರಾರೋಗ್ಯವನ್ನು ಕೊಟ್ಟು ಅವರಿಂದ ಬಹುಕಾಲ ಸೇವೆಯನ್ನು ತೆಗೆದುಕೊಳ್ಳುವ ಸೌಭಾಗ್ಯ ಕನ್ನಡಿಗರದಾಗಲೆಂದು ನಾನು ಹಾರೈಸುತ್ತೇನೆ.

ಘುಲಚಂದ ನಿವಾಸ<br>ಚೌಪಾಟಿ, ಮುಂಬಯಿ-೭ } ರಂ. ಅ. ಜಹಾಗೀರದಾರ.

ನಾರಾಯಣರಾವ ಲೋಕೂರ



ಎಂದರೆ ನ್ಯಾಯಮೂರ್ತಿ

# ನ್ಯಾಯಮೂರ್ತಿ

# ನಾರಾಯಣರಾಯರು

(ಎನ್ಕೆ ಕಂಡಂತೆ)

---

೧

ನಾರಾಯಣರಾವ ಲೋಕೂರ ಎಂದರೆ ನ್ಯಾಯಮೂರ್ತಿ. ಅವರ ಎಡಬಲದ ಎರಡು ಕಣ್ಣುಗಳೇ ನ್ಯಾಯತಕ್ಕಡಿಯ ಎರಡು ಪರಡಿಗಳಂತೆ. ಒಂದು ಎಡಗಣ್ಣು, ಒಂದು ಬಲಗಣ್ಣು ಎಂದು ಉಭಯ ಪಕ್ಷಗಳನ್ನು ಬಗೆದು ಸಮದೃಷ್ಟಿಯ ನ್ಯಾಯತೀರ್ಪನ್ನು ಸಲ್ಲಿಸುವ ಅವರ ನಿಷ್ಪಕ್ಷಪಾತ ನ್ಯಾಯವಿಮರ್ಶೆಯೇ ಅವರನ್ನು ಈ ಉನ್ನತವಾದ ಪಟ್ಟಕ್ಕೆ ತಂದಿದೆ. ನ್ಯಾಯಮೂರ್ತಿ ನಾರಾಯಣರಾಯರದು ಲೌಕಿಕದಲ್ಲಿ ಯಾವಾಗಲೂ ಸಮದೃಷ್ಟಿ; ಶ್ರೀಮಂತ–ದರಿದ್ರ, ಉಚ್ಚ–ನೀಚ ಎಂಬ ಭೇದಭಾವ ಇವರಲ್ಲಿ ಕಂಡುಬರುವದಿಲ್ಲ. ಸೋದರ ಪ್ರಾಂತ, ಸೋದರ–ಭಾಷೆಗಳ ಮಧ್ಯದಲ್ಲಿ ಇವರ ಮನೋವೃತ್ತಿ ಸಮದೃಷ್ಟಿಯದು. 'ನನ್ನ ನಾಡು, ನನ್ನ ಭಾಷೆ, ನನ್ನ ಕನ್ನಡಿಗರು' ಎಂಬ ಅಭಿಮಾನ ಇನ್ನೊಬ್ಬರ ಅವಹೇಳನವನ್ನು ಬಗೆಯಲು ಅರಿಯದು. ಸಮದೃಷ್ಟಿ, ಸರಿಸಮಾನ ಭಾವನೆ, ಸತ್ಯಪ್ರಿಯತೆ ಇವೇ ನ್ಯಾಯಮೂರ್ತಿ ಲೋಕೂರ ಅವರನ್ನು ಲೋಕಪ್ರಿಯರನ್ನಾಗಿ ಮಾಡಿವೆ.

ಕೆಲವೊಂದು ಕಾಲ ನಾನು ನಿತ್ಯ ಚರ್ಚಗೇಟ ಸ್ಟೇಶನ್‌ನಿಂದ ಸೆಕ್ರೇಟೇರಿಯಟ್‌ಗೆ ಹೋಗುತ್ತಿದ್ದೆ. ಹಾದಿಯಲ್ಲಿ ಹಾಯಕೋರ್ಟು. ಹಾಯಕೋರ್ಟನ್ನು ಸಮೀಪಿಸುತ್ತಲೇ ಸರಿಯಾಗಿ ಹತ್ತೂವರೆ (ಮುಂಜಾನೆ) ಆಗಬೇಕು. ಗೆರೆಕೊರೆದಂತೆ ಅದೇ ವೇಳೆಗೆ ಒಂದು ಕಾರು ಬಂದು ನಿಲ್ಲುತ್ತಲೆ ಕಹಳೆ ಊದಬೇಕು. ಸರಕಾರಿ ಸಮವೇಷದಲ್ಲಿದ್ದ ಆಳುಮನುಷ್ಯರು ಭಯಭಕ್ತಿಯಿಂದ ಬಾಗಿ ಮುಜುರೆ ಹಾಕಬೇಕು. ದಿನದಿನವು ಈ ಒಂದು ಚಿಕ್ಕ ಸಂಗತಿ ನನ್ನಲ್ಲಿ ರೋಮಾಂಚದ ಮಿಂಚನ್ನೆ ಹುಟ್ಟಿಸುತ್ತಿತ್ತು. ಆ ಉನ್ನತವಾದ ಹಾಯಕೋರ್ಟಿನ ಕಟ್ಟಡ! ತಕ್ಕಡಿಯನ್ನು ಹಿಡಿದುಕೊಂಡು ನ್ಯಾಯದ ಕಾಟ (ಮುಳ್ಳು) ವನ್ನು ಸಮದೃಷ್ಟಿಯಿಂದ ಸೂಕ್ಷ್ಮವಾಗಿ ನೋಡುತ್ತ ನ್ಯಾಯವನ್ನೇ ತೂಗುತ್ತ ನಿಂತಿರುವ ಒಂದು ಮೂರ್ತಿ. ಹತ್ತೂವರೆಗೆ–ಮದುವೆಯ ಮುಹೂರ್ತದಂತೆ–ಚಾಚೂ ಹೆಚ್ಚುಕಡಿಮೆಯಾಗದಂತೆ ಬಂದು ನಿಲ್ಲುವ ಕಾರು, ಆಗ ಕಹಳೆಯ ಧ್ವನಿ–ನನ್ನಲ್ಲಿ ದಿನದಿನವೂ ಒಂದು ಬೆರಗನ್ನು ಹುಟ್ಟಿಸುವವು. ಹಾಯಕೋರ್ಟಿಗೆ ಹಾಯಕೋರ್ಟಿನದೇ ಒಂದು ವೈಶಿಷ್ಟ್ಯವೆಂಬುದು ಈ ಒಂದು ಕಹಳೆಯವೊಳಗಿನಲ್ಲಿಯೇ ಮಡಗಿತ್ತು. ಈ ಕಹಳೆಯನ್ನು ಕೇಳಿದಾಗ ನನ್ನ ಮನಸ್ಸಿನಲ್ಲಿ ಅದೇ ಕ್ಷಣದಲ್ಲಿ ಮೂಡಿಬರುತ್ತಿರುವ ರಸವಿಚಾರಗಳೆಷ್ಟೋ ಏನೋ! ಅದೊಂದು ಭವ್ಯನಿಮಿಷದಲ್ಲಿ ಆ ಅಧಿಕಾರ ವ್ಯಕ್ತಿಯ ಬಗ್ಗೆ ಇರುವ ಗೌರವ, ಸನ್ಮಾನಗಳನ್ನು ಆ ಕಹಳೆ ಸಾರಿ ಹೇಳುತ್ತಿತ್ತು.

ಮುಂಬಯಿಗೆ ಬಂದು ಕೆಲದಿನಗಳಾದರೂ ನನಗೆ ಹಾಯಕೋರ್ಟು ಕಾಣುವದಾಗಿರಲಿಲ್ಲ. ಕೋರ್ಟಿನ ಕಟ್ಟೆಹತ್ತುವ ಪ್ರಸಂಗ ನನಗೇಕೆ ಎಂದು ದೂರ ಉಳಿದರೂ, ಕೋರ್ಟಿನೊಳಗೆ ನಡೆದಿರುವ ಅಧಿವೇಶನವನ್ನು ಒಮ್ಮೆಯಾದರೂ ನೋಡಬೇಕೆಂಬ ಕುತೂಹಲವೇನೋ ತಾನೇತಾನಾಗಿ ಕುದುರುತ್ತಲಿತ್ತು.

ಖಟ್ಲೆಗಳು ನಡೆದಾಗ ಬೇಕಾದವರು ಒಳಗೆ ಹೋಗಬಹುದೆಂಬ ಭರವಸೆ ನನಗಿದ್ದರೂ ಯಾಕೋ ಧೈರ್ಯ ಸಾಲದು. ಸ್ವಾಭಾವಿಕವಾಗಿಯೇ ನನ್ನದು ಸ್ವಲ್ಪ ಅಧೀರ ಸ್ವಭಾವ. ಬೇಸಗೆಯ ಕಾಲ.

ನವ್ಮಣ್ಣ ಇಲ್ಲಿಗೆ ಬಂದಿದ್ದರು. ಹಾಯಕೋರ್ಟ ನೋಡಬೇಕೆಂದು ಅವರು ಅಪೇಕ್ಷಿಸಿದ್ದರು. ನನಗೂ ಎಳಸಿತು. ಅಣ್ಣತಮ್ಮಂದಿರು ಕೋರ್ಟನಕಟ್ಟೆ ಏರಿದೆವು—ಪ್ರೇಕ್ಷಕರಾಗಿ.

ನ್ಯಾಯ ತೀರ್ಪಿನ ದೃಶ್ಯವನ್ನು ಆಗಾಗ ಚಿತ್ರಪಟಗಳಲ್ಲಿ ನೋಡಿ ನನಗೆ ಗೊತ್ತು. ಸ್ವತಃ ಪ್ರತ್ಯಕ್ಷದಲ್ಲಿ ಕಾಣುವ ಸುಯೋಗ ಬಂದುದಕ್ಕೆ ಸಂಭ್ರಮ. ಅಟ್ಟಕ್ಕೇರಿ ಒಳಗೆ ಪ್ರವೇಶಿಸಿದೆವು. ಒಳಗೆ ಹೋಗಲು ಸ್ವಲ್ಪ ಅನುಮಾನ. ಅನುಮಾನವೇನು ಸ್ವಲ್ಪ ಭಯವೇ ಆಯಿತು. ಹೋಗಿ ಬಾಗಿಲ ಹತ್ತಿರವೇ ಎಡಗಡೆಗೆ ಆರೋಪಿಗಳಿಂದ ದೂರವಾಗಿಯೇ ನಿಂತಿದ್ದರೂ ಎದೆ ಡಡವಡ ಅನ್ನು ತ್ತಿತ್ತು. ವಾತಾವರಣ ಗಂಭೀರವಾಗಿತ್ತು. ಜರ್ಬಾದ ವೇಷ ಧರಿಸಿದ ಪೋಲೀಸ ಅಧಿಕಾರಿಗಳು; ಕಪ್ಪು ನಿಲುವಂಗಿ ಧರಿಸಿ ಅರಳು ಹುರಿದಂತೆ ಮಾತನಾಡಿ ಮನಗಾಣಿಸುವ ಚತುರ 'ಬಾರ್ ಆ್ಯಟ್ ಲಾ' ವಕೀಲರು. ಎದುರಿಗೇ ಚಕ್ರವರ್ತಿಗಳ ಚಿತ್ರ. ಅದರ ಕೆಳಗೇ ಎತ್ತರವಾದ ಪೀಠದಲ್ಲಿ, ಕೇಶರ ವರ್ಣದ ನಿಲುವಂಗಿ ಧರಿಸಿ, (ಆಗ ತಲೆಗೆ 'ಹುಂಜ' ಕಟ್ಟಿರಲಿಲ್ಲ) ನ್ಯಾಯ ನಿರೀಕ್ಷಣೆಗೆ ಎರಡು ಹೊರಗಿನ ಕಣ್ಣು ಸಾಲವು ಎಂಬಂತೆ ಕನ್ನಡಕ ದೊಳಗಿಂದ ಹುಬ್ಬೇರಿಸಿ ನಿರೀಕ್ಷಿಸುವ, ಅಧಿಕಾರ ನೋಟವನ್ನು ಬೀರುತ್ತ ವಕೀಲರ ಹೇಳಿಕೆಯನ್ನು ಕೇಳುತ್ತ ಗಂಭೀರವಾಗಿ ಕುಳಿತ ವ್ಯಕ್ತಿಯ ಕಡೆಗೆ ನನ್ನ ದೃಷ್ಟಿ ಸುಳಿಯಿತು. ಎಡಬಲದಲ್ಲಿ ಆಳು ಮನುಷ್ಯರು ತುದಿಗಾಲ ಮೇಲೆ ನಿಂತಿದ್ದರು. ಎಲ್ಲ ವಾತಾವರಣ ನೋಡಿ ನನ್ನಲ್ಲಿ ಸೋಜಿಗ, ಹರ್ಷೋದ್ಗಾರಗಳು ಅಂತರಂಗದಲ್ಲಿ ತರಂಗ ತರಂಗವಾಗಿ ಮೂಡಿಬಂದವು. ಮಧ್ಯಮಧ್ಯದಲ್ಲಿ ಅಗಳು ಹಿಸುಕಿ ನೋಡುವಂತೆ ನ್ಯಾಯಮೂರ್ತಿಗಳು ಒಂದೊಂದು ಪ್ರಶ್ನೆ ಮಾಡುವರು. ತಮಗೆ ಬೇಕಾದುದಷ್ಟನ್ನೇ ವಕೀಲರ ಮಾತು ಮಾತಿನ ರಾಶಿಯಲ್ಲಿ ಹೆಕ್ಕಿಕೊಳ್ಳುವರು. ನ್ಯಾಯಾಧೀಶರ ಎಡಗಡೆಗೆ ಆರೋಪಿಗಳ ಪಂಜರದಲ್ಲಿ ಒಂದು ವ್ಯಕ್ತಿ ನಿಂತಿತ್ತು. ನ್ಯಾಯ–ಅನ್ಯಾಯದಲ್ಲಿ ಹೆಣ್ಣೂ ಒಂದೇ, ಗಂಡೂ ಒಂದೇ. ಪಂಜರದಲ್ಲಿ

ನಿಂತ ಆ ವ್ಯಕ್ತಿ ಹೆಣ್ಣಾದರೂ ಮಾತಿನಲ್ಲಿ ಗಂಡುತನವಿತ್ತು. ಅಂತೂ ಪ್ರಕರಣ ಹೆಣ್ಣಿನ ತೊಡಕಿಗೇ ಸಂಬಂಧಿಸಿತ್ತೆಂಬುದು ಸ್ಪಷ್ಟವಾಗಿತ್ತು. ತಾನು ಅಪರಾಧಿಯಲ್ಲ ಎಂಬ ಬಿಗುಮಾನ ಅವಳ ಮಾತಿನಲ್ಲಿ ಕಂಡುಬರುತ್ತಿತ್ತು. ನ್ಯಾಯಮೂರ್ತಿಗಳು ನಡುವೆ ಒಂದೊಂದು ಪ್ರಶ್ನೆಮಾಡುವರು. ಅದನ್ನು ಭಾಷಾಂತರಕಾರರು ಆ ವ್ಯಕ್ತಿಗೆ ತಿಳಿಸುವರು. ಆ ವ್ಯಕ್ತಿ 'ಹೌದು-ಇಲ್ಲ' ಎಂದು ಹೇಳುವದು. ವಕೀಲರು ಏನಾದರೂ ಅಡ್ಡತಿಡ್ಡ ಪ್ರಶ್ನೆ ಕೇಳಿದಾಗ, ಬಾಯಿಂದ ಒರಿ ಲಕ್ಕುಹೊಡೆದು ಬಿಡುತ್ತಿತ್ತು ಆ ವ್ಯಕ್ತಿ. ಅಂತೂ ಕಚೇರಿ ಕಟ್ಟೆಯಲ್ಲಿ ಅನುಭವ ಹೊಂದಿದ ಆಸಾಮಿ ಇರಬೇಕು ಎನಿಸಿತು. ನಡೆದ ದೃಶ್ಯಗ ಳನ್ನೆಲ್ಲ ನೋಡುತ್ತ ನಾನು, ನಮ್ಮಣ್ಣ ಹಾವಭಾವಗಳಿಂದಲೇ ಒಬ್ಬರಿ ಗೊಬ್ಬರು ಮಾತನಾಡುತ್ತ ದಂಗುಬಡೆದು ನಿಂತಿದ್ದೆವು. ನ್ಯಾಯಮೂರ್ತಿ ಗಳನ್ನು ಇಬ್ಬರೂ ಎವೆಯಿಕ್ಕದೆ ನೋಡುತ್ತಿದ್ದೆವು. ಒಮ್ಮೆಲೆ ನಮ್ಮಣ್ಣ ನನ್ನ ಹತ್ತಿರ ನುಸುಳಿಬಂದು ಕಿವಿಯಲ್ಲಿ ಗುಣುಗುಟ್ಟಿದ—"ಅವರೇ ಲೋಕೂರ ಅವರು!" ನನ್ನ ಕೂದಲು ನೆಟ್ಟಗಾದವು! 'ಅಂ?' ಎಂದು ಕಣ್ಣಿನಿಂದಲೇ ಉದ್ಗಾರ ಎತ್ತಿದೆ. 'ಹೌದು' ಎಂದು ಆತ ಗೋಣುಹಾಕಿದ. ನ್ಯಾಯಮೂರ್ತಿ ಲೋಕೂರ ಅವರನ್ನು ನಾನು ಕಂಡುದು ಇದೇ ಮೊದಲನೆಯ ಸಲ. ಹತ್ತೂ ದಿಕ್ಕಿನಿಂದ ಪರಿಮಳ ವನ್ನು ಮೂಸುತ್ತಿರುವಾಗ ಹಠಾತ್ತಾಗಿ ಸುಗಂಧಪುಷ್ಪವು ಕಣ್ಣಿಗೆ ಬಿದ್ದಂತಾಯಿತು. ನ್ಯಾಯಮೂರ್ತಿ ಲೋಕೂರ ಅವರನ್ನು ನೋಡಿದ ಕೂಡಲೆ ಏನೊ ವಿಲಕ್ಷಣ ಆನಂದ ಮೈತುಂಬ ಉಕ್ಕಿ ಹರಿದಾಡಿತು: ರೋಮರೋಮದಲ್ಲಿ ಹೊರಚೆಲ್ಲಿತು. 'ಲೋಕೂರವರೇ! ನಮ್ಮ ಕನ್ನಡಿಗರು ಮುಂಬಯಿ ಸರಕಾರದ ನೆತ್ತಿಯ ಮೇಲೆ ಕೂತಿದ್ದಾರಲ್ಲ! ಇಡಿಯ ಪ್ರಾಂತವು ಒಬ್ಬ ಕನ್ನಡಿಗನನ್ನು ಸರ್ವ ವಂದ್ಯರೆಂದು ತಿಳಿಯುತ್ತಿದೆಯಲ್ಲ....' ಇನ್ನೆಷ್ಟೆಷ್ಟೋ ಭಾವನೆಗಳು ಉಕ್ಕಿ ಬಂದವು. ನ್ಯಾಯ ದೃಶ್ಯ ಸುಮಾರು ಒಂದು ತಾಸು ನಡೆದಿರಬಹುದು. ಆ ಅಂಕವನ್ನು ಅಲ್ಲಿಗೆ ಮುಗಿಸಿದರು. ಸಭೆ ಚೆದರಿತು. ನ್ಯಾಯ ಮೂರ್ತಿಗಳು ಎದ್ದರು. ಎತ್ತರವಾದ ನಿಲುವು! ಹಾಯಕೋರ್ಟಿನ

ಮಾನ್ಯವ್ಯಕ್ತಿಗಳು ಇವರೇ ಎಂದು ತೀಡಿ ಹೇಳುವಂತಿತ್ತು. ಕಣ್ಣಿನಲ್ಲಿ ಗಾಂಭೀರ್ಯ, ತೇಜಸ್ಸು, ನ್ಯಾಯಪಾಂಡಿತ್ಯ ತುಂಬಿ ತುಳುಕುತ್ತಿದ್ದವು.

೨

ನಾನು 'ಆಲ್ ಇಂಡಿಯಾ ರೇಡಿಯೋ'ದಲ್ಲಿ ಕನ್ನಡ ವ್ಯವಸ್ಥಾಪಕನೆಂದು ನಿಯಮಿಸಲ್ಪಟ್ಟೆ. ನ್ಯಾಯಮೂರ್ತಿಗಳು 'ಕನ್ನಡ ಹಳ್ಳಿಯ ಬಂಧುಗಳ ಕಾರ್ಯಕ್ರಮ'ದಲ್ಲಿ ಒಮ್ಮೆ ಮಾತನಾಡಬೇಕೆಂದು ಹಂಬಲಿಸಿದೆ. ನ್ಯಾಯಮೂರ್ತಿಗಳನ್ನು ಕಾಣುವುದು ಹೇಗೆ? ಸರಿ. ನಮ್ಮ ಕರ್ನಾಟಕ ಸಂಘದ **ಇಮಾರತಿ**ಯವರೇ ಉಂಟಲ್ಲ! ಈ ಇಮಾರತಿಯ ಆಶ್ರಯ ಇರುವ ವರೆಗೂ ಮುಂಬಯಿಯಲ್ಲಿ ಕನ್ನಡ ಹವ್ಯಾಸಿಗಳಿಗೆ ಏನೂ ತೊಂದರೆ ಇಲ್ಲ. ಇಮಾರತಿಯವರನ್ನು ಕಂಡೆ. ಹುರುಪಿನಿಂದ 'ಹುಂ'ಗುಟ್ಟಿದರು – ನ್ಯಾಯಮೂರ್ತಿಗಳ ಪರಿಚಯ ಮಾಡಿಕೊಡಲಿಕ್ಕೆ, ಅವರನ್ನು ಕನ್ನಡ ಕಾರ್ಯಕ್ರಮದಲ್ಲಿ ಮಾತನಾಡಿಸಲಿಕ್ಕೆ. ನನಗೆ ಹಿಗ್ಗಾಯ್ತು.

ನ್ಯಾಯಮೂರ್ತಿಗಳ ಪರಿಚಯಮಾಡಿಕೊಳ್ಳುವ ಯೋಗ ಇನ್ನೂ ಒದಗಿ ಬಂದಿರಲಿಲ್ಲ. ಅಂತು ವಿಜಯದಶಮಿ – ಅದೊಂದು ಸುದಿನ! ಮಾತುಂಗ, ಖಾಲ್ಸಾ ಕಾಲೇಜನಲ್ಲಿ ಕರ್ನಾಟಕ ಸಂಘದ ಪ್ರಾರಂಭ, ನ್ಯಾಯಮೂರ್ತಿ ಲೋಕೂರ ಅವರಿಂದ. ನನಗೂ ಔತಣವಿತ್ತು. ಸಂಘದ ಪ್ರಾರಂಭೋತ್ಸವವಾಯಿತು. ನ್ಯಾಯಮೂರ್ತಿಗಳ ಕನ್ನಡ ಭಾಷಣವಾಯಿತು: 'ಕರ್ನಾಟಕದ ಹೊರನಾಡಿನಲ್ಲೆಲ್ಲಾ ಕನ್ನಡ ಸಂಘಗಳು ತಲೆಯೆತ್ತಬೇಕು. ನಮ್ಮ ಭಾಷೆಯ ಉನ್ನತಿಗಾಗಿ, ನಮ್ಮ ಸಾಹಿತ್ಯದ ಬೆಳವಣಿಗೆಗಾಗಿ, ನಮ್ಮ ನಾಡಿನ ಪ್ರಗತಿಗಾಗಿ, ನಾವು ಕನ್ನಡಿಗರು ನಮ್ಮ ಸಂಘಸಂಸ್ಥೆಗಳನ್ನು ನಿರ್ಮಿಸಿಕೊಂಡು ಹರೆಯ ನೆತ್ತರವನ್ನು ಕನ್ನಡ ಚಟುವಟಿಕೆಗಳಿಗಾಗಿ ಅರ್ಪಿಸಿದರೆ, ಇನ್ನೊಂದು ನಾಡಿನ ಅಪಪ್ರಚಾರವೆಂದು ತಿಳಿದವರು ಅರ್ಥಮಾಡಲಾರರು' ಎಂದು ನ್ಯಾಯಮೂರ್ತಿಗಳು ಸ್ಪಷ್ಟವಾಗಿ ಮಂಡಿಸಿದರು. ಅಧ್ಯಕ್ಷರ ಮಾತಿಗೆ ಸಭಿಕರು ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.

ಏಕಾಏಕಿ ಮಾತಾಡುವ ಸರತಿ ನನಗೂ ಬಂತು. ತಲೆ ಅಲ್ಲಾಡಿ ಸಲೊ ಹೂಂಗುಟ್ಟಲೊ ತಿಳಿಯಲಿಲ್ಲ. ಏನು ಮಾತಾಡುವದು ಹೊಳೆಯಲಿಲ್ಲ. ಗೆಳೆಯರ ಆಗ್ರಹ ಮೀರಲಾರದೆ ಮಾತಾಡಲು ಎದ್ದೆ. ಕನ್ನಡ ಚಟುವಟಿಕೆಗಳಲ್ಲಿ ಇಂತಹ ದುರ್ಘಟ ಪ್ರಸಂಗಗಳು ಬಂದೇ ಬರುತ್ತವೆಂಬ ಅರಿವು ನನಗಿತ್ತು. ಅಂತೆಯೇ ರಹಸ್ಯವಾಗಿ ಒಂದೆರಡು ಮಾತು ವಿಚಾರಿಸಿಕೊಂಡೇ ಹೋಗಿದ್ದೆ.

"ನ್ಯಾಯಮೂರ್ತಿಗಳ ಮುಂದೆ ನಾನೊಂದು ಕರುಣಾಜನಕ ಮೂರ್ತಿ, ನಿಮ್ಮ ಮುಂದೆ ನಿಂತಿದ್ದೇನೆ. ಅವರೊ ಕೈಯಲ್ಲಿ ತಕ್ಕಡಿ ಹಿಡಿದುಕೊಂಡು ಮಾತನಾಡುವವರು. ನನ್ನದು ಮಾತನಾಡುವ ಹೊಯ್ದಾಟದಲ್ಲಿ ತೂಕ ತಪ್ಪಬಹುದು....... ಇಂದು ವಿಜಯದಶಮಿ. ಕನ್ನಡ ನಾಡಹಬ್ಬದ ನಂದಾದೀಪ ನಾಲ್ಕೂ ನಿಟ್ಟಿನಲ್ಲಿ ಬೆಳಗಿದೆ. ಈ ವಿಜಯದಶಮಿಯ ದಿನ ಕನ್ನಡಗೆಲುವಿನ ಬಾವುಟವನ್ನು ಈ ಕೋಟೆಯ ಮೇಲೆ ಹಾರಾಡಿಸಲು ಮುಂದೆ ಬಂದಿದ್ದೀರಿ. ಕನ್ನಡ ನಾಡಿನ ಸೀಮೋಲ್ಲಂಘನಮಾಡಿ ಭಾರತದೇಶದ ಹೆಬ್ಬಾಗಿಲದ ವರೆಗೆ ಮುಂದಡಿ ಇಟ್ಟಿದ್ದೀರಿ. ನಿಮ್ಮ ವಿಜಯಯಾತ್ರೆ ಯಶಸ್ವಿಯಾಗಲಿ.......' ಇನ್ನೇನೇನೊ ಮಾತನಾಡಿ ಬೆಮರೊರಸಿಕೊಂಡೆ. ನ್ಯಾಯಮೂರ್ತಿಗಳೊಡನೆ ಉಪಚಾರದ ಪರಿಚಯ ನನಗಿನ್ನೂ ಆಗಿರಲಿಲ್ಲ. ನಾನು ನನ್ನ ಆಸನದಲ್ಲಿ ಮೆಲ್ಲನೆ ಕುಳಿತುಕೊಂಡೆ. ನ್ಯಾಯಮೂರ್ತಿಗಳು ನನ್ನನ್ನು ನೋಡಿದರು. ಕಣ್ಣಿನಿಂದ ತಮ್ಮ ಬಳಿ ಕರೆದರು. ಕೈ ಕುಲುಕಿದರು. ಪ್ರೀತಿಯ ನಗೆ ಬೀರಿದರು.

'ನಿಮ್ಮ ದನಿ ದಿನಾಲು ಗಾಳಿಯ ಮೇಲೆ ನಾವು ಕೇಳುತ್ತೇವೆ' ಎಂದರು. 'ಇವೊತ್ತು ವಿಜಯದಶಮಿ' ನಾನೆಂದುಕೊಂಡೆ. ನ್ಯಾಯಮೂರ್ತಿಗಳ ಪರಿಚಯಕ್ಕಾಗಿ ಚಡಪಡಿಸುತ್ತಿದ್ದೆ. ನ್ಯಾಯಮೂರ್ತಿಗಳೇ ನನ್ನನ್ನು ಮುಂದೆ ಕರೆದರು. ನ್ಯಾಯಮೂರ್ತಿಗಳ ಔದಾರ್ಯ ಇದು.

'ಕನ್ನಡ ಬಾನಲಿಯಲ್ಲಿ ನಿಮ್ಮದೊಂದು ಭಾಷಣವಾಗಬೇಕು' ಎಂದು ಬಿನ್ನವಿಸಿಕೊಂಡೆ. 'ಹೌದು ಇವಾರತಿಯವರು ಹೇಳಿದ್ದಾರೆ. ಒಮ್ಮೆ ಮನೆಗೆ ಬನ್ರಿ ವಿಚಾರಿಸೋಣ' ಎಂದರು. ಅವರ ಸಹಜ

ವಾದ ಒಪ್ಪಿಗೆ ನನ್ನಲ್ಲಿ ಏನೋ ಒಂದು ಹೆಚ್ಚಿನ ವಿಶ್ವಾಸವನ್ನು ಹುಟ್ಟಿಸಿತು.

ದೊಡ್ಡವರೊಡನೆ ಹೇಗೆ ಮಾತಾಡಬೇಕು? ಎಲ್ಲಿ ಏನು ಹೆಚ್ಚುಕಡಿಮೆ ಆಗುತ್ತದೊ ಎಂದು ಅಂಜಿ ಅಳುಕುತ್ತಿರುವಾಗ ದೊಡ್ಡವರು ಸಣ್ಣವರ ಬೆನ್ನುತಟ್ಟಿ ಸಹಾನುಭೂತಿಯ ನಗೆ ಬೀರಿ ಸರಿಸಮಾನ ಭಾವನೆಯಿಂದ ಕೈಕುಲುಕಿ ಮಾತನಾಡಿಸಿದಾಗ ಸಣ್ಣವನಲ್ಲಿ ಒಂದು ಆತ್ಮವಿಶ್ವಾಸ ಬೆಳೆಯುತ್ತದೆ. ವಿನಯ, ಸರಿಸಮಾನ-ಸ್ಕಂದಭಾವನೆಗಳು ದೊಡ್ಡವನ ದೊಡ್ಡಸ್ತಿಕೆಯನ್ನು ಹೆಚ್ಚಿಸುತ್ತವಲ್ಲದೆ ಅದರಿಂದ ಅವನ ಮಾನ ಎಂದೂ ಮುಕ್ಕಾಗುವುದಿಲ್ಲ. ಆದರೆ ತತ್ವತಃ ಇದನ್ನು ತಿಳಿದರೂ ಆಚರಣೆಯಲ್ಲಿ ತಂದ ಮಹಾತ್ಮರೆಷ್ಟು?

ಒಂದು ದಿನ ಬೆಳಿಗ್ಗೆ ನ್ಯಾಯಮೂರ್ತಿಗಳ ಮನೆಗೆಂದು ನಾನೂ, ಕರ್ನಾಟಕ ಸಂಘದ ಕಾರ್ಯದರ್ಶಿಗಳೂ ಹೊರಟೆವು. ಮೊದಲೆ ವೇಳೆಯ ನಿಶ್ಚಯ ಆಗಿರಲಿಲ್ಲ. ಹಾದಿಯಲ್ಲಿ 'ಫೋನ' ಸಿಕ್ಕಿತು. ಸುಮಾರು ಒಂಬತ್ತು ವರೆಗೆ ಬರುತ್ತೇವೆಂದು ಸಾಹೇಬರಿಗೆ ತಿಳಿಸಿದ್ದಾಯಿತು. 'ಆಪೇರಾ ಹೌಸಿ'ಗೆ ಬಂದೆವು. ಅರ್ಧ ತಾಸು ಬಸ್ಸಿಗಾಗಿ ಕ್ಯೂಹಚ್ಚಿ ಕಾಯಬೇಕಾಯಿತು. ಕೊನೆಗೊಮ್ಮೆ ಬಸ್ಸು ಬಂತು. ಮಲಬಾರ ಬೆಟ್ಟ ಏರಿದೆವು. ಬಸ್ಸು ಇಳಿದೆವು. ಮೌಂಟಪ್ಲೆಜಂಟ ರೋಡಿಗೆ ಕಾಲ್ನಡಿಗೆಯಿಂದ ಬಂದೆವು. ಸ್ವಲ್ಪ ಮುಂದೆ ಹೋಗುತ್ತಲೆ M. A. Jinnah – ಎಂದು ಹಲಗೆ ಹಚ್ಚಿತ್ತು. ಹೊರಗೊಬ್ಬ ಪೋಲೀಸ ಕುಳಿತಿದ್ದ. ಥಟ್ಟನೆ ನಾನು ನಿಂತೆ. 'ಜಿನ್ನಾ ಮನೆ?' 'ಹೌದು', ಎಂದರು ನನ್ನ ಸಂಗಡಿಗರು. ಹೊರಗೆ ಸಣ್ಣದಾಗಿ ಕಂಡರೂ ಒಳಗೆ ದೊಡ್ಡ ಆವಾರ. ವಿಶಾಲವಾಗಿ ಬೆಳೆದ ತಂಪು ಮರ. ಇಷ್ಟು ಸಣ್ಣ ವ್ಯಕ್ತಿ, ಇಂಥಾ ದೊಡ್ಡ ಮನೆ! 'The House that Jinnah built'! ಎಂದೆ. ಜಿನ್ನಾ ಮನೆಯ ಎದುರಿಗೆ ಮಗ್ಗುಲದಲ್ಲಿಯೆ ನ್ಯಾಯಮೂರ್ತಿಗಳ ಮನೆ.

ಆಳು ಮನುಷ್ಯನಿಗೆ ತಿಳಿಸಿದ್ದಾಯಿತು. 'ಸ್ನಾನ ಮಾಡಿದ್ದಾರೆ' ಎಂದು ಹೇಳಿದ. ಕರ್ನಾಟಕ ಸಂಘದ ಕಾರ್ಯದರ್ಶಿಗಳು ನನ್ನನ್ನು

ನೋಡಿದರು. ನಾನೂ ಸಹಾನುಭೂತಿಯಿಂದ ಮುಗುಳ್ನಕ್ಕೆ. 'ನಾನು ಬಂದಿದ್ದೇನೆಂದು ತಿಳಿಸು' ಎಂದರು ಕಾರ್ಯದರ್ಶಿಗಳು. ಅಂತೂ ಒಳಗೆ ಸುದ್ದಿ ಮುಟ್ಟಿತು. ಮನೋನೈರ್ಮಲ್ಯವನ್ನು ತಿಳಿಹೇಳುವ ಮಡಿಯು ವಸ್ತ್ರದಿಂದಲೆ ಹೊರಗೆ ಬಂದರು, ಹಾಯ್‌ಕೋರ್ಟಿನ ನ್ಯಾಯಮೂರ್ತಿಗಳು! ಅವರು ಜಡ್ಜುವಿನಲ್ಲಿದ್ದಾಗ ಕಾಣುವದಕ್ಕೇ ಎದೆ ದಡದಡ ಎಂದರೆ ಸೋಜಿಗವಲ್ಲ. ನಾವೋ ಒಂದು ತಾಸು ತಡಮಾಡಿದ್ದೇವೆ. ನ್ಯಾಯಮೂರ್ತಿಗಳು ಸ್ನಾನ ಮಾಡಿದ್ದಾರೆ. ನಿತ್ಯದ ಆಹ್ನೀಕದಲ್ಲಿ ತೊಡಗಿದ್ದಾರೆ. ಇಂಥಾ ವಿಷಮ ಪ್ರಸಂಗ. ಆದರೂ ಅವರು ಸ್ನೇಹದಿಂದ ಹೊರಗೆ ಬಂದರು. ನಗೆಯಿಂದ ಬರಮಾಡಿದರು. ಅವರೀಗ ನ್ಯಾಯಮೂರ್ತಿ ಲೋಕೂರ ರವರಾಗಿರಲಿಲ್ಲ, ಲೋಕದ ಸಹೃದಯ ನಾರಾಯಣರಾಯರಾಗಿದ್ದರು.

'ನಾನು ನಿಮ್ಮ ಹಾದಿನೋಡಿ ಸ್ನಾನಮಾಡಿದೆ' ಎಂದರು.

'ಹೌದು, ಸ್ವಲ್ಪ ತಡ ಆಯಿತು.......' ದೇಶಾವರಿ ನಕ್ಕೆವು. ನಾರಾಯಣರಾಯರೂ ನಕ್ಕರು. ಅಂಥದರಲ್ಲಿಯೇ ನಮಗೆ ಮಾತನಾಡಲು ಸಮಯ ಕಲ್ಪಿಸಿಕೊಟ್ಟರು. ರೇಡಿಯೋದಲ್ಲಿ ಮಾತನಾಡಬೇಕೆಂದು ನಾನು ಬಿನ್ನವಿಸಿಕೊಂಡೆ. ಮರುಮಾತನಾಡದೆ ಔತಣ ಸಂತೋಷದಿಂದ ಸ್ವೀಕರಿಸಿದರು. 'ನಮಗೆ ಮಹಿಳಾ ಕಾರ್ಯಕ್ರಮಕ್ಕೆ ಮಹಿಳೆಯರೆ ಇಲ್ಲ. ಇದೊಂದು ಇಲ್ಲಿ ಮಹಾಕೊರತೆ ಆಗಿದೆ' ಎಂದು ಪ್ರಸ್ತಾಪಿಸಿ ಸ್ವಲ್ಪ ಅನುಮಾನಿಸುತ್ತ – 'ಶ್ರೀಮತಿ ಲೋಕೂರ ಅವರು ಭಾಗವಹಿಸಬಹುದೆ?' ಎಂದು ಕೇಳಿದೆ.

'ಆಗಬಹುದು' ಎಂದರು.

ಮಾತನಾಡುತ್ತಿರುವಷ್ಟರಲ್ಲಿ ಉಪಹಾರ ಬಂತು. 'ಛೆ, ಛೆ ಈಗ ಆಗಿದೆ' ಎಂದು ನಮ್ಮ ಉಪಚಾರದ ಮಾತಾಯಿತು. ಮನೆಗೆ ಬಂದ ಅತಿಥಿಗಳನ್ನು ಸ್ಪರ್ಧೆಗೆ ಹಚ್ಚಿ ಹೊಟ್ಟೆ ಜಡಿದು ತುಂಬಿಸುವುದು ರಾಯರ ಆತಿಥ್ಯದ ರೀತಿಯೆಂದು ಕಾರ್ಯದರ್ಶಿಗಳು ಆಮೇಲೆ ನನಗೆ ಸ್ವಂತ ಅನುಭವವನ್ನು ವರ್ಣಿಸಿಹೇಳಿದರು.

ರಾಯರ ಮನೆಗೆ ನಾನು ಪರಿಚಯದವನಾದೆನೆಂಬುದು ನನಗೆ

ಹೆಮ್ಮೆಯ ಮಾತು. ಸೌಭಾಗ್ಯವತಿ ಲಕ್ಷ್ಮೀಬಾಯಿ ಲೋಕೂರ ಅವರೂ ಲೀಲಾ ಫಣಸಲಕರರೂ ಅವರ ತಂಗಿ ಶಶಿಕಲಾ ಲೋಕೂರ ಅವರೂ ಈ ಮೊದಲೆ ಮಹಿಳಾ ಕಾರ್ಯಕ್ರಮದಲ್ಲಿ ಭಾಗವಹಿಸಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದ್ದರು. ಅಂದಿನ ಮಹಿಳಾ ಕಾರ್ಯಕ್ರಮದ ಬಗ್ಗೆ ಅನೇಕ ಕಡೆಯಿಂದ ಶ್ರೋತೃವರ್ಗದ ಮೆಚ್ಚಿನೋಲೆಗಳು ಬಂದುವು. ಅಂದು ಶಶಿಕಲಾ ಹೇಳಿದ—

‘ಮುಂದೆ ನಡಿ ಮುಂದೆ ನಡಿ ಬೇಗ ಬೇಗನೆ ।
ಹಿಂದೆ ಉಳಿಯ ಬೇಡೊ ಕಂದಾ ॥
ಕಾಲಿನೊಳಗೆ ರುಳಿಯ ಗೆಜ್ಜೆ ।
ಬಹಳ ಭಾರವಾಗುತಿದೆಯೊ’ ॥....................ಎಂಬ

ಹಾಡು ಬಹುಜನರ ಚಿತ್ತವನ್ನು ಆಕರ್ಷಿಸಿತ್ತು. ‘ನೀಲ ಹವಳದಂತೆ ಮುಖವು’ ಎಂಬ ಉಪಮೆ ನನ್ನನ್ನು ಮುಗ್ಧಗೊಳಿಸಿತ್ತು. ಈ ಕವಿತೆ ಬರೆದವರು ಶ್ರೀಮತಿ ಲಕ್ಷ್ಮೀಬಾಯಿ ಲೋಕೂರ ಎಂಬುದು ಆಮೇಲೆ ತಿಳಿದಾಗ ಉಂಟಾದ ಸಂತೋಷದ ಸೋಜಿಗವು ವಿಲಕ್ಷಣವಾದುದು. ‘ಗಾಳಿಬೀಸದಿದ್ದರೆ ಹೂವಿನ ಕಂಪು ಹೇಗೆ ಹರಡೀತು?’ ನನ್ನೊಳಗೇ ಎಂದುಕೊಂಡೆ.

ಮತ್ತೊಮ್ಮೆ ನ್ಯಾಯಮೂರ್ತಿಗಳ ಮನೆಗೆ ಬಂದೆ, ಮಹಿಳಾ ಕಾರ್ಯಕ್ರಮದ ಮಾತುಕತೆಗಾಗಿ. ಯಾವ ವಿಶ್ವಾಸದಿಂದ ಅವರು ನನ್ನನ್ನು ಕಾಣುತ್ತಿದ್ದರೊ ಆ ವಿಶ್ವಾಸವೇ ನನ್ನನ್ನು ಮತ್ತೆಮತ್ತೆ ಬರಮಾಡಿತು.

ಯಾವಾಗಲೂ ಅಚ್ಚುಕಟ್ಟಾದ ಸಲಕರಣೆಗಳಿಂದ ಒಪ್ಪುವ ಸುವ್ಯವಸ್ಥಿತವಾದ ‘ಫರ್ನಿಚರ’ದಿಂದ ಅಲಂಕೃತವಾದ ಇವರ ಮನೆಯ ಪಡಸಾಲೆಯನ್ನು ಪ್ರವೇಶಿಸುತ್ತಲೆ ಏನೋ ಒಂದು ರಸಿಕವಾತಾವರಣವನ್ನು ಪ್ರವೇಶಿಸಿದಂತೆ ಮನಸ್ಸಿಗೆನಿಸುತ್ತದೆ. ವಿಶಾಲವಾದ ಹಾಲು. ವಿಸ್ತೀರ್ಣವಾಗಿ ಹಾಸಿದ ಜಮಖಾನೆ. ಆರಾಮಾಸನ, ಚಿತ್ರಗಳು, ಉಳಿದ ಕಲಾಕೃತಿಗಳು ಇವುಗಳ ದಿವ್ಯ ದರ್ಶನದಿಂದ ಕಣ್ಮನಗಳಿಗೆ ಸೊಗಸೆನಿಸುತ್ತದೆ.

ಕ್ಷಣಹೊತ್ತು ಅಲ್ಲಿಯೇ ಕಾಯುತ್ತಿರುವಾಗ ಒಳಗಿನ ಮನೆಗೇ ಕರೆ ಬಂತು. ಒಳಗೆ ಹೋಗುತ್ತಲೆ ಇಬ್ಬರು ನ್ಯಾಯಮೂರ್ತಿಗಳನ್ನು ನೋಡಿದೆ. ಒಂದು ಮೂರ್ತಿಯು ತದ್ರೂಪ ಇನ್ನೊಂದು! ರಾಯರು ಕನ್ನಡಿಯೆದುರಿಗೇನೂ ಕುಳಿತಿರಲಿಲ್ಲ. ಚಿತ್ರಕಾರರೊಬ್ಬರು ನ್ಯಾಯ ಮೂರ್ತಿಗಳ ಚಿತ್ರವನ್ನು ಬರೆಯುತ್ತಿದ್ದರು. ಚಿತ್ರಯಾವುದು, ವ್ಯಕ್ತಿ ಯಾವುದು, ಒಮ್ಮೆಲೆ ತಿಳಿಯಲಿಲ್ಲವೆಂದರೆ ಅತಿಶಯೋಕ್ತಿ ಅಲ್ಲವೇಅಲ್ಲ. ಕಲಾವಿದ **ಹೆಬ್ಬಾರ** ಅವರ ಕೃತಿ ಪರಿಚಯವುಳ್ಳವರಿಗೆ ಈ ಮಾತು ಪ್ರತ್ಯಯಕ್ಕೆ ಬಂದಿರಬಹುದು. ಕೆಲಹೊತ್ತಿಗೆ ನ್ಯಾಯಮೂರ್ತಿಗಳು ಆಸನದಿಂದ ಎದ್ದರು. ರುದ್ರಭಟ್ಟಕವಿಯ ಒಂದು ಸಾಲು ನೆನಪಾಯಿತು. –'ತನ್ನಿಳಯ ಮಣಿಪುತ್ರಿಕಾ ಸಂಕುಳದೊಳ್ ಯಾನಾನು ಮೇಯಮಾಯ್ತಾ ಪದದೊಳ್'। ಯಾನಾನುಮೇಯದಿಂದ ಇವರೇ ನ್ಯಾಯಮೂರ್ತಿಗಳೆಂದು ಕಂಡರಿತೆ. ಕಲಾವಿದರ ಬಗ್ಗೆ ತಮ್ಮಲ್ಲಿರುವ ಆದರ–ಗೌರವದಿಂದ,ರಾಯರು ತೃಪ್ತಿಯ ನಗೆ ಬೀರುತ್ತ–'ಹೇಗಾಗಿದೆ?' ಎಂದರು. ನ್ಯಾಯಪೀಠದಲ್ಲಿ ಗಂಭೀರ ಮುದ್ರೆಯಿಂದ ಕುಳಿತ ಭಂಗಿ. ಈ ಕ್ಷಣಕ್ಕೆ ನ್ಯಾಯ ತೀರ್ಪುಕೊಡಲು ತರ್ಕದ ತಕ್ಕಡಿಯನ್ನು ತಲೆ ಯಲ್ಲಿ ತೂಗುತ್ತಿದ್ದಾರೇನೊ ಎಂಬಂತೆ ಮುಖಮುದ್ರೆ— ನೀಳವಾದ ಮೂಗು, ತೇಜವಾದ ಕಣ್ಣು, ಅರುವತ್ತು ವಯಸ್ಸು ಸಮೀಪಿಸು ತ್ತಿದ್ದರೂ ಉತ್ಸಾಹವಡಗದ ಚೈತನ್ಯ, ಸೌಮ್ಯ ಸ್ನೇಹಸ್ನಿಗ್ಧಕಳೆ. ತೀಕ್ಷ್ಣವಾದ ಪಾಂಡಿತ್ಯದ ಹೊಗರಿಗೆ ವಿರಳ ಕೇಶವೂ ಒಪ್ಪುವ ಮಸ್ತಕ.

'ಸರಿ, ಚಲನವಲನವೊಂದೇ ಇಲ್ಲೆನ್ನುವಷ್ಟು ಸಜೀವವಾಗಿದೆ ಚಿತ್ರ' ನಾನೆಂದೆ. ರಾಯರು ಕಲಾಕೋವಿದರ ಬಗ್ಗೆ ತಮಗಿರುವ ಆದರ ಪ್ರಶಸ್ತಿಯನ್ನು ನಗೆಯಿಂದ ವ್ಯಕ್ತ ಮಾಡಿದರು. ರಾಯರಿಗೆ ಕಲೆಯಲ್ಲಿ ಆಸಕ್ತಿ ಬಹಳ—ಸಂಗೀತವೆ ಇರಲಿ, ಕಾವ್ಯವೆ ಇರಲಿ, ಚಿತ್ರಕಲೆಯೆ ಇರಲಿ—ಯಾವುದರಲ್ಲೂ ವಿಶೇಷವಾದ ಅಭಿರುಚಿ. ಈ ಕಲಾಭಿರುಚಿ ಅವರ ಮನೆತನದಲ್ಲೆ ತಲೆಯಿಂದ ತಲೆಗೆ ಇಳಿದು ಹರಿದು ಬಂದಿದೆ. ಈ ಕಲಾಭಿರುಚಿಯನ್ನು ಮಕ್ಕಳಲ್ಲಿಯೂ ಬಿತ್ತಿ ಬೆಳೆಯಿಸಿದ್ದಾರೆ.

ಮಕ್ಕಳ ರಸಿಕ ಚಟುವಟಿಕೆಗಳಲ್ಲಿ ಆಸ್ಥೆವಹಿಸಿ ಮಕ್ಕಳು ರಚಿಸಿದ ಕಲಾ ನಿರ್ಮಿತಿಗಳಲ್ಲಿ ಹಿರಿಯ ತಂದೆಯಂತೆ ಪ್ರೀತಿ, ಹಿಗ್ಗು ತೋರುತ್ತಾರೆ.

ನಾವು ಕುಳಿತಲ್ಲಿ ಗೋಡೆಗೆ ಕೈಯಿಂದ ಬರೆದ ಬಣ್ಣದ ಚಿತ್ರಗಳೆರಡು ತಗಲಿಸಿದ್ದವು. ನಾನು ಅವುಗಳ ಕಡೆಗೆ ನೋಡಿದೆ. ರಾಯರು ನನ್ನನ್ನು ನೋಡಿ– "ನಮ್ಮ ಇನ್ನೊಬ್ಬ ಮಗಳು ಲೀಲಾ (ಈಗ ಶ್ರೀಮತಿ ಲೀಲಾ ಫಣಸಲಕರ) ತೆಗೆದುವು" ಎಂದು ನುಡಿದರು. ಸೌ. ಲೀಲಾ ಫಣಸಲಕರ ಅವರು ಮ್ಯಾಟ್ರಿಕ್ ಪಾಸಾದ ಕೂಡಲೇ 'ಜೆ. ಜೆ. ಸ್ಕೂಲ ಆಫ್ ಆರ್ಟ್ಸ'ನಲ್ಲಿ ಚಿತ್ರಕಲಾ ವ್ಯಾಸಂಗ ಮಾಡಿದರು. ಅವರ ಹಿರಿಯ ಮಗಳು– ಈಗ ಶ್ರೀಮತಿ ವನಮಾಲಾ ಭವಾಳಕರ – (ಶ್ರೀಯುತ ಭವಾಳಕರರು ಲಂಡನ್ ಪಿಎಚ್.ಡಿ. ಇದ್ದಾರೆ. ಮಧ್ಯ ಪ್ರಾಂತದಲ್ಲಿ ಸಾಗರ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರು, ಶ್ರೀಮತಿ ಭವಾಳಕರರೂ ಅಲ್ಲಿಯೆ ಪ್ರಾಧ್ಯಾಪಕರಾಗಿದ್ದಾರೆ.) ಬಿ.ಎ., ಎಂ.ಎ. ದಲ್ಲಿ ಪ್ರಥಮ ವರ್ಗದಲ್ಲಿ ಸಂಸ್ಕೃತ ವಿಷಯ ತೆಗೆದುಕೊಂಡು ಮೇಲ್ಪಂಕ್ತಿಯಲ್ಲಿ ಪಾಸಾಗಿದ್ದಾರೆ. ಮುಂಬಯಿ ಮತ್ತು ಕಲಕತ್ತಾ ವಿಶ್ವವಿದ್ಯಾಲಯಕ್ಕಷ್ಟೆ ಅಲ್ಲ, ಅಖಿಲ ಕರ್ನಾಟಕಕ್ಕಷ್ಟೆ ಅಲ್ಲ, ಅಖಿಲ ಭಾರತ ಸುಶಿಕ್ಷಿತ ಮಹಿಳಾ ಸಮಾಜಕ್ಕೇ ಅಪೂರ್ವ ಶ್ರೇಯಸ್ಸನ್ನು ತಂದಿದ್ದಾರೆ; ಸರಸ್ವತಿಯ ಕೊರಳಹಾರದಲ್ಲಿ ಒಂದು ನಾಯಕ ಮುತ್ತಿನಂತೆ ಶೋಭಿಸುತ್ತಿದ್ದಾರೆ. 'ಹತ್ತು ಹಡೆಯುವದಕ್ಕಿಂತ ಒಂದು ಮುತ್ತು ಹಡೆಯಬೇಕು' ಎನ್ನುತ್ತಾರೆ. ಆದರೆ ಹತ್ತೂ ಮುತ್ತುಗಳನ್ನೇ ಹಡೆದ ತಂದೆ ತಾಯಿಯ ಭಾಗ್ಯಕ್ಕೆ ಎಣೆಯುಂಟೆ? ಇದು ರಾಯರ ಮನೆಯ ರಸಿಕತೆ. ರಾಯರ ಮನೆಯೆಂದರೆ ವನಮಾಲಾ–ಲೀಲಾವತಿಯವರ ತವರು ಮನೆಯನ್ನುವದಕ್ಕಿಂತ ರಸಿಕತೆಯ ತವರು ಮನೆಯೆಂದರೆ ಒಪ್ಪುವ ಮಾತಾಗಿದೆ. ರಾಯರ ಮನೆತನ ಸರಸ್ವತಿಯ ಬಳಗವಿದ್ದಂತೆ.

ನಾನು ಮಹಿಳಾ ಕಾರ್ಯಕ್ರಮದ ಮಾತುಕತೆಗಾಗಿ ಬಂದಿದ್ದೆನಷ್ಟೆ? ಸೌ. ಲೋಕೂರ ಅವರು ಲೀಲಾವತಿ ಮುನಷಿ ಅವರು ಪುರಸ್ಕರಿಸಿದ 'ದ್ವಿಭಾರ್ಯಾ ಪ್ರತಿಬಂಧನ' ಕಾಯಿದೆಯ ವಿಷಯವಾಗಿ ಒಂದು ಚಿಕ್ಕ ದೃಶ್ಯ ಬರೆದಿದ್ದರು. ಕಾಯಿದೆಯ ಸಂಪೂರ್ಣ ಪರಿಚಯ

ಮಾಡಿಕೊಂಡು ಸಾಮಾನ್ಯರಿಗೆ ತಿಳಿವಂತೆ ಅದನ್ನು ಹೇಳುವ ಕ್ರಮವು ಬಹಳ ಮಾರ್ಮಿಕವಾಗಿತ್ತು.

"ಮಹಿಳೆಯರಿಗೆ ಸಂಬಂಧಿಸಿದ ಎಲ್ಲ ಕಾಯಿದೆಯ ವಿಚಾರ ನೀವು ಹೀಗೆ ತಿಳಿಯಾಗಿ ಮನೋರಂಜಕವಾಗಿ ನಾಟಕರೂಪದಲ್ಲಿ ಬರೆಯಿರಿ," ಎಂದು ನಾನು ಬಿನ್ನವಿಸಿಕೊಂಡೆ.

"ಅವರು ಇಂತಹ ಕಾಯಿದೆಗಳನ್ನೆಲ್ಲಾ ಅಭ್ಯಾಸಮಾಡಿ ಲೇಖನ ರೂಪದಲ್ಲಿ ಈ ಮೊದಲೆ ಮರಾಠಿಯಲ್ಲಿ ಪ್ರಸಿದ್ಧಿಸಿದ್ದಾರೆ"ಂದು ನ್ಯಾಯ ಮೂರ್ತಿಗಳು ಹೇಳಿದರು.

"ನೀವು ಇವನ್ನೆಲ್ಲಾ ಕನ್ನಡ ಲೋಕಕ್ಕೆ ಕೊಡಬೇಕು. ನಿಮ್ಮ ಕಾಣಿಕೆ ನಮ್ಮ ತಾಯ್ನಾಡಿಗೆ ಬೇಕು," ಎಂದು ನಾನು ಅರಿಕೆ ಮಾಡಿ ಕೊಂಡಾಗ ಅವರೂ ಅಷ್ಟೇ ಉತ್ಸಾಹದಿಂದ ಒಪ್ಪಿಕೊಂಡರು.

ನಮ್ಮ ಭಾರತದಲ್ಲಿ ಈಗ ನಮ್ಮ ರಾಜ್ಯವು ತಲೆಯೆತ್ತಿದೆ. ಇದು ನಮ್ಮ ರಾಜ್ಯ; ರಾಮರಾಜ್ಯವೆಂದು ಜನ ಕರೆಯುತ್ತಿದ್ದಾರೆ. ರಾಮ ರಾಜ್ಯದಲ್ಲಿ ಎಲ್ಲರೂ ರಾಮಚಂದ್ರನಂತೇ ಏಕಪತ್ನೀವ್ರತಸ್ಥರಾಗಿರ ಬೇಡವೇ? ರಾಮಚಂದ್ರ ಕಾಯಿದೆಕಾನೂನಿಗಂಜಿ ಏಕ ಪತ್ನೀವ್ರತಸ್ಥ ನಾಗಿರಲಿಲ್ಲ. ಇಂದು ಲೀಲಾವತಿಬಾಯಿಯವರು ಕಾಯಿದೆಯ ಅಂಕುಶ ಹಿಡಿದು, ರಮಣರನ್ನು ರಾಮಚಂದ್ರರನ್ನು ಮಾಡಲು ಯತ್ನಿಸು ತ್ತಿದ್ದಾರೆ! ವಿವೇಕದ ಅಂಜಿಕೆಯೊಂದಿದ್ದರೆ ಸಾಲದೆ? ವಿಚಾರದ ಕಾಯಿದೆಯ ಮುಂದೆ ಕಚೇರಿಯ ಕಾಯಿದೆ ಏನು ಮಾಡೀತು?

ಶ್ರೀಮತಿ ಲೋಕೂರ ಅವರು ವಿವೇಚಿಸಿದ ಏಕಪತ್ನೀ ಕಾಯಿದೆಯ ವಿಚಾರ ಹೃದಯ ರಂಜಕವಾಗಿತ್ತು; ಚಿತ್ತ ಬೋಧಕವಾಗಿತ್ತು. ಹಳ್ಳಿಯ ವಾತಾವರಣಕ್ಕೆ ಒಪ್ಪುವಂತಹ ಸಹಜ ಸುಂದರ ಸಂಭಾಷಣೆ, ಹಳ್ಳಿಯ ದಿನದಿನದ ದಾಂಪತ್ಯದ ತೊಡಕಿನ ಒಂದು ದೃಷ್ಟಾಂತದಿಂದಲೇ ಸಂಭಾಷಣೆ ಪ್ರಾರಂಭವಾದ ರೀತಿ—ಜನಮನವನ್ನು ಸಹಜವಾಗಿ ಮೆಚ್ಚಿಸುವಂತಾಗಿತ್ತು.

ಕಾರ್ಯಕ್ರಮವು ಬಾನುಲಿಯಲ್ಲಿ ಪ್ರಸಾರವಾಯಿತು. ಮಾಲೆ

ಮೂಲೆಗಳಿಂದ ಮುಕ್ತಕಂಠವಾಗಿ ಹೊಗಳಿಕೆಗಳು ಬಂದುವು. ಶ್ರೀಮತಿ ಲೋಕೂರ ಅವರು ಕಾಯಿದೆಯ ಅಭ್ಯಾಸ ಚೆನ್ನಾಗಿ ಮಾಡಿದ್ದಾರೆ. ನ್ಯಾಯಮೂರ್ತಿಗಳ ಧರ್ಮಪತ್ನಿ ಅವರು! ಕಾಯಿದೆ ಕ್ಷೇತ್ರದಲ್ಲಿ ನ್ಯಾಯಮೂರ್ತಿಗಳ ಉತ್ತಮಾಂಗಿ.

"ಈಗ ಕನ್ನಡದಲ್ಲಿ ರೇಡಿಯೋ ಆಗಿ ನಮಗೊಂದು ಸ್ಫೂರ್ತಿ ಸಿಕ್ಕಿದೆ" ಎಂದರು.

'ಕನ್ನಡ ರೇಡಿಯೊದಿಂದ' ನಿಮಗೆ ಸ್ಫೂರ್ತಿ ಸಿಕ್ಕಿದೆಯೋ ಇಲ್ಲವೋ! ನಿಮ್ಮಿಂದ ಕನ್ನಡರೇಡಿಯೊಕ್ಕೆ ಸ್ಫೂರ್ತಿ ಅಖಂಡವಾಗಿ ಸಿಕ್ಕಿದೆ. ನೀವು ಮಾತ್ರ ಹೀಗೇ ಬರೆಯುತ್ತಾ ಹೋಗಬೇಕು' ಎಂದು ನಾನೂ ಆಗ್ರಹಪಡಿಸಿದೆ. ಕನ್ನಡ ನಾಡಿನಲ್ಲಿ ಮಹಿಳೆಯರ ಮುನ್ನಡೆಯಿಲ್ಲ ಎಂಬ ಕೂಗು. ಇಂತಹ ಮಹಿಳೆಯರು ಕನ್ನಡಕ್ಕಾಗಿ ಲೇಖನಿ ಹಿಡಿದರೆ ಎಷ್ಟು ಉಪಕಾರ! ಶ್ರೀಮತಿ ಲೋಕೂರರವರಲ್ಲಿ ಕನ್ನಡದಲ್ಲಿ ಬರೆಯಬೇಕೆಂಬ ಸ್ಫೂರ್ತಿ ತುಂಬಿದೆ. ಕನ್ನಡ ಪ್ರಕಾಶಕರು, ಕನ್ನಡ ಪತ್ರಿಕಾಕರ್ತರು, ಇಂತಹ ಜಾಣಿನ ಕಣಿಯನ್ನು ಬಳಸಿಕೊಳ್ಳದೆ ಹೋದರೆ ಯಾರದು ತಪ್ಪು? ನದಿ ಹರಿಯುತ್ತದೆ. ನಮ್ಮ ಹೊಲಕ್ಕೆ ಕಾಲುವೆ ಮಾಡಿಕೊಂಡು ಈಜಿಗೆ ಹೊರಳಿಸಿಕೊಂಡರೆ ನಮ್ಮ ಹೊಲ ಫಲವತ್ತಾಗುತ್ತದೆ. ಅದು ಕೃಷಿಯ ಕರ್ತವ್ಯ. ಲೋಕೂರ ಕುಟುಂಬವು ಇಂದು ಕನ್ನಡಕ್ಕಾಗಿ ಕೈಕಟ್ಟಿದರೆ ಕನ್ನಡನಾಡು ಬಹುಮಟ್ಟಿಗೆ ಧನ್ಯವಾದೀತು. ವನಮಾಲಾ ಭವಾಳಕರರು ವಿಶೇಷ ಪಾಂಡಿತ್ಯದಿಂದಲ್ಲದೆ ಸಾಹಿತ್ಯ ಪ್ರತಿಭೆಯಿಂದಲೂ ಮರಾಠಿ ಸಾಹಿತ್ಯದಲ್ಲಿ ಹೆಸರಾಂತವರಾಗಿದ್ದಾರೆ. ಅವರು ಕನ್ನಡಕ್ಕೂ ತಮ್ಮ ಕಾಣಿಕೆ ಸಲ್ಲಿಸುವಂತಾಗಬೇಕು. ನಮ್ಮ ಉಜ್ವಲ ವ್ಯಕ್ತಿಗಳು ಒಂದಿಲ್ಲೊಂದು ಕಾರಣದಿಂದ ಹೊರನಾಡಿಗೆ ಹೋಗಿ ನೆಲಸಬೇಕಾಗಿದೆಯೆಂದು ಅವರ ಬಗ್ಗೆ ನಾವು ಮರೆವಿನ ತೆರೆಯೆಳೆಯುವುದು ಕರ್ತವ್ಯಚ್ಯುತಿಯಾದೀತು! ಈ ಮೊದಲೆ ಕನ್ನಡ ಸಾಹಿತ್ಯ ಸಮ್ಮೇಲನಗಳ ಮಹಿಳಾ ಕಾರ್ಯಕ್ರಮಗಳು ಶ್ರೀಮತಿ ಲಕ್ಷ್ಮೀಬಾಯಿ ಲೋಕೂರ, ವನಮಾಲಾ ಭವಾಳಕರ ಅವರಿಂದ ಅಲಂಕರಿಸಲ್ಪಡಬೇಕಿತ್ತು.

ಸಾಮಾನ್ಯ ಕನ್ನಡಿಗನಿಗೆ, ಕನ್ನಡತಿಗೆ ಕಾಯಿದೆ ಜ್ಞಾನ ಎಷ್ಟಿದೆ? ಆದರೆ ಸಾಮಾನ್ಯ ನಾಗರಿಕರು ಸಾಮಾನ್ಯ ಕಾಯಿದೆ ಬಲ್ಲವನಾಗಿರ ಬೇಕೆಂಬುದು ಒಪ್ಪಬೇಕಾದ ಮಾತು. ಕನ್ನಡ ಪತ್ರಿಕೆಗಳಲ್ಲಿ ಕಾಯಿದೆ ವಿಚಾರವಾಗಿ ಒಂದು ಪುಟವೂ ಒಂದೆಡೆಗೂ ಇಲ್ಲ. ಬರೆಯುವವ ರಿಲ್ಲಿದ್ದಾರೆ. ಸಂಪಾದಕರು ಅಲ್ಲಿದ್ದಾರೆ. **'ಯೋಜಕಸ್ತು ತತ್ರ ದುರ್ಲಭಃ'** ಈ ಕೊರತೆ ಬೇಗನೆ ಹಿಂಗಲಿ.

ಮೊನ್ನೆಮೊನ್ನೆ ಮುಂಬಯಿ ಪ್ರೌಢ ಶಿಕ್ಷಣ ಸಪ್ತಾಹ ಜರುಗಿತು. ಅಖಿಲ ಭಾರತ ಆಕಾಶವಾಣಿಯ ಮುಂಬಯಿಯ ಕೇಂದ್ರದಲ್ಲಿಯೂ ಉಪನ್ಯಾಸ ಮಾಲೆ ಗಾಳಿಯಲ್ಲಿ ನಡೆಯಿತು. ಮುಂಬಯಿ ಮಂತ್ರಿ ಗಳೂ, ಮುಖ್ಯ ಮಂತ್ರಿಗಳೂ, ಬೇರೆ ಬೇರೆ ಭಾಷೆಯಲ್ಲಿ ಭಾಷಣ ಮಾಡಿದರು. ಸಪ್ತಾಹವು ಪ್ರಾರಂಭಿಸುವ ಪೂರ್ವದಲ್ಲಿ ಮುಖ್ಯಮಂತ್ರಿ ಗಳು ನ್ಯಾಯಮೂರ್ತಿಗಳ ಮನೆಗೆ ಬಂದಾಗ—'ನೀವೂ ಪ್ರೌಢ ಶಿಕ್ಷಣ ಸಪ್ತಾಹದ ಬಾನುಲಿ ಭಾಷಣದಲ್ಲಿ ಭಾಗವಹಿಸಬೇಕು'—ಎಂದರಂತೆ. ನ್ಯಾಯಮೂರ್ತಿಗಳು–'ನೀವು ಭಾಷಣ ಕನ್ನಡದಲ್ಲೇಕೆ ಏರ್ಪಡಿಸಲಿಲ್ಲ? ಗುಜರಾಥಿ, ಮರಾಠಿಗಳಲ್ಲಿದ್ದ ಮೇಲೆ ಕನ್ನಡದಲ್ಲಿ ಬೇಡವೆ?' ಎಂದು ಸಮುದೃಷ್ಟಿಯ ನ್ಯಾಯಮೂರ್ತಿಗಳು ಕೇಳಿದಾಗ, ಅವರ ಮಾತಿಗೆ ಮರ್ಯಾದೆ ಸಿಕ್ಕಿತು. ಸ್ವತಃ ನ್ಯಾಯಮೂರ್ತಿಗಳೇ ಕನ್ನಡದಲ್ಲಿ ಮಾತನಾಡಬೇಕೆಂದು ನಿರ್ಧಾರವಾಯಿತು. ನ್ಯಾಯಮೂರ್ತಿಗಳು ಮರುಮಾತಿಲ್ಲದೆ ಆಮಂತ್ರಣ ಸ್ವೀಕರಿಸಿದರು. ಮನುಷ್ಯ ತ್ರಾಣಕ್ಕೆ ಬೆಟ್ಟವು ಎಷ್ಟು ತಾನೇ ಹಣಿದೀತು? ಮಾಯಾವಿಯೊಬ್ಬನು ಬೆಟ್ಟ ವನ್ನು ಮುಟ್ಟಿದರೆ ಸಾಕು ನೆಲಸಮವಾಗಿ ಹೋದೀತು. ನ್ಯಾಯ ಮೂರ್ತಿಗಳ ಬಾಯಿಂದ ಬರುವ ಅಧಿಕಾರವಾಣಿಯೂ ಮಾಯಾವಿಯ ಮಂತ್ರಹಸ್ತವಿದ್ದಂತೆ. ಬೆಟ್ಟದಂತಹ ವಿಘ್ನ ಬೆಣ್ಣೆಯಂತೆ ಕರಗಿ ಹೋಗುತ್ತದೆ. ಅನ್ಯಾಯವಿದ್ದಲ್ಲಿ ಅಧಿಕಾರದ ಅಕ್ಕಸಾಲಿಗನೇ ಕಿವಿ ಚುಚ್ಚಬೇಕು. ಬಾನುಲಿಯಲ್ಲಿ ಕನ್ನಡ ಸ್ಥಾನಮಾನ ಇನ್ನೂ ಬೆಳೆಯ ಬೇಕಾಗಿದೆ. ಕನ್ನಡಕ್ಕೆ ಸ್ವತಂತ್ರ ವಿಶ್ವವಿದ್ಯಾನಿಲಯವು ಮೂರ್ತಿಗೊಳ್ಳ ಬೇಕಾಗಿದೆ. ಭಿನ್ನಭಿನ್ನವಾದ ಕನ್ನಡನಾಡು ಒಂದಾಗಿ ಹೆಣೆದುಕೊಳ್ಳ

ಬೇಕಾಗಿದೆ. ಭಟಕಳ ಬಂದರು ಕಟ್ಟಬೇಕಾಗಿದೆ. ಎರಡು ಕೋಟಿ ಕನ್ನಡದ ಜನಮನಗಳ ಬಂದರ ಕಟ್ಟಬೇಕಾಗಿದೆ. ಏಕೀಭಾವದ ಬಳ್ಳಿ ಹಬ್ಬಿಸಬೇಕಾಗಿದೆ. ದೊಡ್ಡ ಗುರಿಯನ್ನು ಸಾಧಿಸುವಾಗ ಸಣ್ಣ ಪುಟ್ಟಭಾವನೆಗಳು ಮಾಯವಾಗಿ ಹೋಗಬೇಕು. ''ನಾನು ಮೇಲು ಜಾತಿಯವ, ನೀನು ಕೀಳು ಜಾತಿಯವ; ನಾನು ಉಚ್ಚ, ನೀನು ನೀಚ; ನಾನು ಶ್ರೀಮಂತ, ನೀನು ದರಿದ್ರ; ನಾನು ಪಂಡಿತ, ನೀನು ಪಾಮರ ಎಂಬ ತಾರತಮ್ಯ ಭಾವವಳಿಯಲಿ, ಸೋದರಭಾವ ಮೊಳೆಯಲಿ, ಬೆಳೆಯಲಿ''— ನ್ಯಾಯಮೂರ್ತಿಗಳು ಹೊಸವರುಷದ ಹೊಸ್ತಿಲದ ಮೇಲೆ ನಿಂತು, ಎರಡು ಕೋಟಿ ಕನ್ನಡಿಗರಿಗೆ ಬಾನುಲಿಯ ಮೂಲಕ ಗಾಳಿಯಲ್ಲಿ ಬೀರಿದ ಶುಭ ಸಂದೇಶವಿದು. ಕನ್ನಡನಾಡಿನಲ್ಲಿ ಮೂಲೆ ಮೂಲೆಯಲ್ಲಿ ಕನ್ನಡಿಗನ ಎದೆಎದೆಯಲ್ಲಿ ಎಲ್ಲೆಲ್ಲಿಯೋ ಅವಿತುಕೊಂಡಿರುವ ವಿಷಮತೆಯನ್ನೂ, ಅನ್ಯಾಯದ ಬೀಜವನ್ನೂ ಕಿತ್ತಿಹಾಕಿ, ಕನ್ನಡಿಗರನ್ನೂ ಕನ್ನಡನಾಡನ್ನೂ ನ್ಯಾಯಪಥಕ್ಕೆ, ಸತ್ಯಪಥಕ್ಕೆ ಹಚ್ಚುವುದಕ್ಕೆ ಕನ್ನಡನಾಡಿನ ಬೇಡಿಕೆಗಳನ್ನು ಪೂರೈಸಲು ಉಚ್ಚ ಅಧಿಕಾರಿಗಳು ಕನ್ನಡ ಕಟ್ಟಾಭಿಮಾನಿಗಳಾಗಿ ದುಡಿಯುವುದಕ್ಕೆ ನ್ಯಾಯಮೂರ್ತಿ ಲೋಕೂರರಂತಹರು ದೊರೆತರೆ ಕನ್ನಡವು ಧನ್ಯವಾದೀತಲ್ಲವೆ? ಬ್ಯಾ. ಜಯಕರರಂತಹರಿದ್ದುದರಿಂದ ಮಹಾರಾಷ್ಟ್ರ ವಿಶ್ವವಿದ್ಯಾನಿಲಯ ಸ್ಥಾಪನೆಯ ಪ್ರಯತ್ನವು ಫಲಕಾರಿಯಾಯಿತು. ಇಂದು ಕನ್ನಡ ವಿಶ್ವವಿದ್ಯಾನಿಲಯದ ಸುಂದರ ಮಂದಿರವನ್ನು ಕಟ್ಟುವದಕ್ಕೆ ಲೋಕೂರ ಅವರಂತಹ ರೂವಾರಿಗಳು ಸಿಕ್ಕ ಮೇಲೆ ಕನ್ನಡಿಗರು ಭಾಗ್ಯಶಾಲಿಗಳಲ್ಲವೆ?

ನ್ಯಾಯಮೂರ್ತಿಗಳು ಅಂದು ಪ್ರೌಢಶಿಕ್ಷಣ ಸಪ್ತಾಹದಲ್ಲಿ ಭಾಷಣ ಮಾಡಲು ಬಾನುಲಿ ಕಚೇರಿಗೆ ಬಂದರು. ಸಂಜೆ ೬-೧೫ಕ್ಕೆ ಕಾರ್ಯಕ್ರಮವಿತ್ತು. ಹತ್ತು ನಿಮಿಷ ಮೊದಲು 'ಸ್ಟುಡಿಯೊ'ದೊಳಗೆ ಹೋದೆವು. 'ಇಂದು ಸಂಜೆ ಆರರ ಸುದ್ದಿ ಕೇಳುವದನ್ನು ನಾನು ತಪ್ಪಿಸಿಕೊಂಡೆ' ಎಂದು ನುಡಿದರು. 'ನೀವು ಸುದ್ದಿ ತಪ್ಪದೆ ಕೇಳುತ್ತೀರಾ? ಎಂದು ಬಾನುಲಿ ಅಧಿಕಾರಿಗಳೊಬ್ಬರು ಕೇಳಿದರು. 'ಹೌದು

ಎರಡು ಹೊತ್ತಿನ ಸುದ್ದಿ—ಸಂಜೆಯ ಕನ್ನಡ ಹಳ್ಳಿಯ ಬಂಧುಗಳ ಕಾರ್ಯಕ್ರಮ—ಇಷ್ಟು ತಪ್ಪದೆ ಕೇಳುತ್ತೇನೆ' ಎಂದು ಉತ್ತರಿಸಿದರು. ನ್ಯಾಯಮೂರ್ತಿಗಳ ಹೃದಯದಿಂದ ಉಕ್ಕಿಬಂದ ಕನ್ನಡ ಅಭಿಮಾನವು ಬಾನುಲಿಯ ಅಧಿಕಾರಿಗಳಲ್ಲಿ ಸ್ವಲ್ಪ ಆಶ್ಚರ್ಯವನ್ನು ಉಂಟು ಮಾಡಿರ ಬೇಕು. ಸಾರ್ವಜನಿಕ ಕಾರ್ಯಕಲಾಪಗಳಲ್ಲಿ – ಸಭೆ ಸಮ್ಮೇಲನಗಳಲ್ಲಿ ನಾನು ನ್ಯಾಯಮೂರ್ತಿಗಳನ್ನೂ ಅವರ ಶ್ರೀಮತಿಯವರನ್ನೂ ಕಂಡಾ ಗೊಮ್ಮೆ– 'ನಿನ್ನೆ ನಿಮ್ಮ ಕಾರ್ಯಕ್ರಮ ಕೇಳಿದೆವು'– ಎಂದು ನಗುತ್ತ ಉತ್ತರ ಕೊಡುತ್ತಾರೆ. ಆ ಮಾತು ನನಗೆ ಪ್ರತಿಸಲವೂ ಉತ್ತೇಜನದ ಒಂದು ಅಮೃತ ಘುಟಿಕೆಯಂತೆ ಪರಿಣಮಿಸಿದ್ದರೆ ಆಶ್ಚರ್ಯವೇನೂ ಇಲ್ಲ.

ನಾನು ಕನ್ನಡ ಬಾನುಲಿಯ ಪ್ರಚಾರಕ್ಕೆ ಹೊರಟಿರುವದಿಲ್ಲ. ನನಗೆ ನ್ಯಾಯಮೂರ್ತಿಗಳ ಸಂಬಂಧ ಬಂದುದು ಕನ್ನಡ ಬಾನುಲಿಯ ಮೂಲಕ. ಅದೇ ಸಂದರ್ಭದಿಂದಲೆ ಆರಂಭವಾಗಿ ನ್ಯಾಯಮೂರ್ತಿಗಳ ಕೋಮಲವಾದ ಕನ್ನಡ ಹೃದಯವನ್ನು ಅರಿತುಕೊಳ್ಳಲು ಸಮರ್ಥ ನಾಗಿದ್ದೇನೆ. ಕನ್ನಡದ ಮೇಲಿನ ಪ್ರೀತಿಗಾಗಿ ನ್ಯಾಯಮೂರ್ತಿಗಳು ನನ್ನನ್ನು ಪ್ರೀತಿಯಿಂದ ಕಾಣುತ್ತ ಬಂದಿದ್ದಾರೆ. ಕನ್ನಡಕ್ಕಾಗಿ ಅವರಿಗೆ ಪ್ರೇಮ, ಅಭಿಮಾನ; ಕನ್ನಡ ಕಾರ್ಯಕರ್ತರಿಗಾಗಿ ಅವರಿಗೆ ಪ್ರೇಮ, ಆದರ. ಈ ಪ್ರೇಮ, ಈ ಆದರ, ಈ ಅಭಿಮಾನಗಳನ್ನು ವ್ಯಕ್ತ ಮಾಡುವಾಗ ನ್ಯಾಯಮೂರ್ತಿಗಳು ತಾವು ಹೈಕೋರ್ಟಿನ ಉಚ್ಚ ಅಧಿಕಾರಿಗಳು ಎಂದು ಮಾತನಾಡುವದಿಲ್ಲ. ಆ ಅಧಿಕಾರ ದರ್ಪ ಅವರ ನಡೆನುಡಿಯಲ್ಲಿ ಒಮ್ಮೆಯೂ ಇಣುಕುವದಿಲ್ಲ. ನ್ಯಾಯಮೂರ್ತಿ ಗಳನ್ನು ಕಾಣುವ ಕನ್ನಡ ವ್ಯಕ್ತಿ ಎಷ್ಟೇ ಸಣ್ಣವನಿರಲಿ, ನ್ಯಾಯ ಮೂರ್ತಿಗಳ ಮನಸ್ಸು ದೊಡ್ಡದಾಗಿಯೇ ಉಳಿಯುವುದು. ಅವನ ಬಗ್ಗೆ ಹೃದಯ ಸರಳವಾಗಿಯೇ ಕಂಡು ಬರುವುದು.

ಹುಟ್ಟಾ ದೊಡ್ಡವನಿದ್ದವನು ಉಚ್ಚ ಪದವಿಗೇರಿದ ಹಾಗೆ ಸರಳ– ಸಾಮಾನ್ಯನೇ ಆಗಿ ಉಳಿಯುತ್ತಾನೆಂಬುದನ್ನು ನಾನು ನಾರಾಯಣ ರಾಯರ ಮನೋವೃತ್ತಿಯಿಂದ ಕಂಡುಕೊಂಡೆ. ನನಗೆ ಅನೇಕ ಸಲ

ಕುತೂಹಲ. 'ನ್ಯಾಯಮೂರ್ತಿಗಳು ಕಚೇರಿಯಲ್ಲಿಯೂ ಇಷ್ಟೇ ಸರಳವಾಗಿರುತ್ತಾರೆಯೇ?' ಎಂದು ಇವಾರಾರತಿಯವರನ್ನು ಆಗಾಗ ಕೇಳುವೆ. 'ಎಲ್ಲರೊಡನೆಯೂ ಇಷ್ಟೇ ಸಮಾನ ಪ್ರೀತಿಯ ವರ್ತನೆ ಅವರದು' ಎಂದು ಪದೆ ಪದೆ ಒಂದೇ ಉತ್ತರ ಕೊಡುತ್ತಿದ್ದರು.

'ನಾನು ಸಂಘದ ಕೆಲಸಕ್ಕಾಗಿ, ಸಾಹೇಬರ ಸಹಿಗಾಗಿ ಅನೇಕ ಸಲ ವಿಷಮ ವೇಳೆಯಲ್ಲಿಯೂ ಹೋಗಿದ್ದೇನೆ. ಒಮ್ಮೆಯೂ ಮರೆತು ಕೂಡ ಅವರಿಂದ ಬೇಸರದ ವರ್ತನೆ ತೋರಿ ಬಂದಿಲ್ಲ. ಒಮ್ಮೆಯಂತೂ ಅವರು 'ಚೀಫ'ರೊಡನೆ ಹೊರಟಿದ್ದರು. ನಾನು ಅವರ ಕಡೆಗೆ ಹೋಗಿ ಸಹಿಗಾಗಿ ಕಾಗದ ಚಾಚಿದೆ. 'ಸ್ವಲ್ಪ ಅವಸರವಿತ್ತಲ್ಲ; ಎಂತಹ ವೇಳೆಗೆ ಬಂದಿರಿ'. ಎಂದು ಮೆಲುಮಾತಿನೊಡನೆ ಲೆಕ್ಕಣಿಕೆ ತೆಗೆದು ಸಹಿ ಹಾಕಿಯೇ ಕಳಿಸಿದರು.' ಎಂದರು.

ತಮ್ಮ ಕೈಕೆಳಗಿನ ಅಧಿಕಾರಿಗಳೊಡನೆಯೂ ನ್ಯಾಯಮೂರ್ತಿಗಳು ಇದೇ ರೀತಿ. ಅಧಿಕಾರ ನಡಸಿದರೇ ಜೀವಕ್ಕೆ ತೃಪ್ತಿಯೆಂಬ ಕಡಿಮೆಯ ಅಂತಸ್ತನ್ನು ಮೀರಿ ಮೇಲಕ್ಕೆದ್ದಾರೆ ಈ ಹೈಕೋರ್ಟಿನ ಅಧಿಕಾರಿಗಳು. ಒಂದೊಂದು ಜೀವ ಒಂದೊಂದು ರೀತಿ. ಇದು ಅಪರೂಪ ಜೀವವಿಷ್ಟೆ.

ದರ್ಪ ನಡಸದಿದ್ದರೆ ತಾನು ದೊಡ್ಡ ಅಧಿಕಾರಿಯೆಂದು ಉಳಿದವರು ತಿಳಿಯುವರೊ ಇಲ್ಲವೋ ಎಂಬ ಸಂಶಯ ಕೆಲವರಿಗಿರುತ್ತದೆ. ಅಂತೇ ತಮ್ಮ ಸ್ಥಾನ ಭದ್ರತೆಗಾಗಿ ಅವರು ದರ್ಪದಿಂದಲೇ ಮಾತನಾಡುತ್ತಾರೆ. ಮಾತು ಮಾತಿಗೆ ಗಾಂಭೀರ್ಯ. ತಮ್ಮ ಘನತೆಯನ್ನು ಹೇಳಿಕೊಳ್ಳದ ಹೊರತು ಜಗತ್ತಿನಲ್ಲಿ ಅವರಿಗೆ ಮಾತನಾಡಲಿಕ್ಕೆ ಆಹಾರವೇ ದೊರೆಯುವುದಿಲ್ಲ. ಇದೂ ಒಂದು ಮಟ್ಟ. ಒಮ್ಮೊಮ್ಮೆ ಲೋಕಕ್ಕೆ ತಕ್ಕ ಆಚಾರವೂ ಅಧಿಕಾರಿಗಳಲ್ಲಿ ಬೇಕಾಗುತ್ತದೆ.

ಲೋಕವನ್ನು ಬಗ್ಗಿಸಿ ಮಣಿಸಬೇಕೆಂದು ಕೆಲವರು ಆಚರಿಸಿದರೆ, ಲೋಕೂರ ನಾರಾಯಣರಾಯರು ಲೋಕವನ್ನು ಬಾಗಿ ಮಣಿಸುತ್ತಾರೆ; ಮಣಿಸಿದ್ದಾರೆಯೆಂಬಲ್ಲಿ ಸಂದೇಹವೇನು? ಅದರಂತೆಯೇ ಬಗ್ಗಿಸುವವನಿಗೆ ಮಣಿಯಬೇಡ, ಬಾಗುವವನಿಗೆ ಮಣಿ—ಎಂಬ ತತ್ವದ ಜೀವಂತ–ಮೂರ್ತಿ ನಮ್ಮ ನ್ಯಾಯಮೂರ್ತಿಗಳಿದ್ದಾರೆ.

ಕನ್ನಡ ಹಳ್ಳಿಯ ಬಂಧುಗಳ ಬಾನುಲಿಯ ಸಂಬಂಧದಿಂದ ಮೊದಲಾಗಿ ನ್ಯಾಯಮೂರ್ತಿಗಳೊಡನೆ ಆಪ್ತಸ್ನೇಹವು ಹೆಚ್ಚತೊಡಗಿತು. ನ್ಯಾಯಮೂರ್ತಿಗಳ ಬಳಿಗೆ ಅನೇಕ ಸಲ ಬಂದು ಹೋದಂತೆ ನ್ಯಾಯಮೂರ್ತಿಗಳ ಬಗ್ಗೆ ಕುತೂಹಲ ಹೆಚ್ಚತೊಡಗಿತು. ಅವರ ಜೀವನ ಚರಿತ್ರವನ್ನು ಹೆಚ್ಚು ಹೆಚ್ಚು ಸವಿಸ್ತಾರವಾಗಿ ತಿಳಿದುಕೊಳ್ಳಬೇಕೆನಿಸ ತೊಡಗಿತು. ಅವರ ಮನೆಗೆ ಬಂದಾಗೊಮ್ಮೆ ಅನೇಕ ಬಗೆಯ ಪ್ರಶ್ನೆಗಳನ್ನು ನಾನು ಮಾಡುವೆ. ನ್ಯಾಯಮೂರ್ತಿಗಳು ಯಾವ ಪ್ರಶ್ನೆಯನ್ನೂ ದೂಡಿಕೊಡದೆ, ಎಲ್ಲದಕ್ಕೂ ಸರಳವಾಗಿ ಸಮಾಧಾನಕರವಾಗಿ ಉತ್ತರ ಕೊಡುತ್ತಿದ್ದರು.

"ನೀವು ನ್ಯಾಯಮೂರ್ತಿಗಳೇ ಆಗಬೇಕೆಂದು ಸಣ್ಣವರಿದ್ದಾಗ ಸಂಕಲ್ಪ ಮಾಡಿದ್ದಿರೇನು?" ನಾನೊಮ್ಮೆ ಕೇಳಿದೆ.

"ನನ್ನ ಒಲವು ಮೊದಲಿನಿಂದಲೂ ಕಾವ್ಯ-ಸಾಹಿತ್ಯದ ಕಡೆಗೆ. ಆದರೆ 'ನಾನಾ' (ಹಿರಿಯರು ತಮ್ಮ ಚಿರಂಜೀವರನ್ನು ಕರೆಯುವ ಅಭಿದಾನ) ಕಾಯಿದೆಯನ್ನೇ ಹಿಡಿಯಬೇಕೆಂದು ನಮ್ಮ ಹಿರಿಯರ ಅಪೇಕ್ಷೆ", ಎಂದರು.

ನಿಜವಾದ ಮೇಧಾವಿಗೆ ಯಾವ ವಿಷಯವೂ ಆಪ್ತೆ. 'ಪ್ರಭವತಿ ಶುಚಿರ್ಬಿಂಬಗ್ರಾಹೆ ಮಣಿಃ.' ಮಣಿಯು ಯಾವ ವಸ್ತು ಎದುರಿಗಿದ್ದರೆ, ಅದನ್ನು ಗ್ರಹಣಮಾಡಿಕೊಂಡು ಪ್ರತಿಬಿಂಬಿಸುತ್ತದೆ. ಪ್ರತಿಭಾಸಂಪನ್ನನಿಗೆ ಕಾವ್ಯವೂ ಆಪ್ತೆ; ಕಾಯಿದೆಯೂ ಆಪ್ತೆ; ಶಾಸ್ತ್ರವೂ ಆಪ್ತೆ, ಸಂಗೀತವೂ ಆಪ್ತೆ.

ನ್ಯಾಯಮೂರ್ತಿಗಳು ತಮ್ಮ ಇಲ್ಲವೆ ಹಿರಿಯರ ಸಂಕಲ್ಪಕ್ಕಿಂತ ದೇವರ ಸಂಕಲ್ಪದಿಂದಲೆ ಕಾಯಿದೆಯ ಕ್ಷೇತ್ರದಲ್ಲಿ ಕಾಲಿಟ್ಟರೆಂದು ಹೇಳಬೇಕು.

ಮೊದಲಿನಿಂದಲೂ ಸಂಸ್ಕೃತ-ಗಣಿತ ವಿಷಯದಲ್ಲಿ ವ್ಯಾಸಂಗವೇ ಹೆಚ್ಚು. ಅವರ ಕುಲಪುರೋಹಿತರಾದ ವೆಂಕಟಾಚಾರ್ಯರ ಚಿರಂಜೀವರಾದ ಮ. ವೆ. ಕಟ್ಟಿ ಇವರು ಸಂಸ್ಕೃತ-ಗಣಿತಗಳನ್ನು ಕಲಿಸಿ ನಿಷ್ಣಾತಗೊಳಿಸಿದರು. ಇಂಗ್ಲಿಷ ಆರನೆಯ ಇಯತ್ತೆಯಲ್ಲಿದ್ದಾಗಲೆ 'ನಾನಾ'

ಕಾಳಿದಾಸನ ಶಾಕುಂತಲವನ್ನು ಶಾಲೆಯ ವಾರ್ಷಿಕೋತ್ಸವದಲ್ಲಿ ಸಂಸ್ಕೃತದಲ್ಲೇ ಅಭಿನಯಿಸುವ ನಿಮಿತ್ತವಾಗಿ ಇಡಿಯ ನಾಟಕವನ್ನೆ ಮುಖೋದ್ಗತ ಮಾಡಿಬಿಟ್ಟರು. ಮರುವರ್ಷ ಇನ್ನೊಂದು ನಾಟಕ ಪ್ರದರ್ಶನ— ಇನ್ನೊಂದು ನಾಟಕ ಪಠನ. ಭಟ್ಟ ನಾರಾಯಣನ 'ವೇಣೀ ಸಂಹಾರ' ಮುಖಗತವಾಯಿತು. ಮುಂಬಯಿ ವಿಲ್ಸನ್ ಕಾಲೇಜಿಗೆ ಬಂದ ಮೇಲೆ ಮಹಾಮಹೋಪಾಧ್ಯಾಯ **ಕಾಣೆ** ಅವರ ಪ್ರೀತಿಯ ಶಿಷ್ಯರಾದರು. ಕಾಣೆ ಅವರಿಂದ 'ಭರ್ತೃಹರಿ', ಪ್ರೊ. ಭಾಂಡಾರಕರ ಅವರಿಂದ ಕಾಳಿದಾಸನ ಶಾಕುಂತಲ, ಎರಡನ್ನೂ ತೊಳೆ ತೊಳೆಯಾಗಿ ಬಿಡಿಸಿ ಕಾವ್ಯದ ಕಬ್ಬು ಹಿಂಡಿ ರಸವುಂಡರು. ಮೈಗೂಡಿಸಿ ಕೊಂಡರು.

ಸಂಸ್ಕೃತ ವ್ಯಾಸಂಗ ಲೋಕೂರ ಮನೆತನದಲ್ಲಿ ಪರಂಪರಾಗತ ವಾದುದು. ಸ್ವಲ್ಪ ವಿನೋದವಾಗಿ ಹೇಳಬೇಕಂದರೆ, ಇದಕ್ಕೆ ಇವರ ಮನೆಯಲ್ಲಿರುವ 'ಕಿಲ್‌ಹಾರ್ನ ವ್ಯಾಕರಣ'ವೇ ಸಾಕ್ಷಿ. ಅದೇ ಪುಸ್ತಕ ವನ್ನು ಲೋಕೂರ ಅವರ ತಂದೆಯಿಂದ ಲೋಕೂರ ಮಕ್ಕಳೆಲ್ಲಾ ಅರಗಿಸಿಕೊಂಡಿದ್ದಾರೆ. ಪುಸ್ತಕದ ಮೇಲೆ ಮೂರು ತಲೆಮಾರಿನ ನಾಮಾಂಕಿತಗಳೆಲ್ಲ ಮುದ್ರಿಸಲ್ಪಟ್ಟಿವೆ.

"ವಿಚಾರಗಳನ್ನು ವಿವಿಧ ರೀತಿಯಲ್ಲಿ ಸುಂದರವಾಗಿ ಹೃದ್ಯವಾಗಿ ಹೊರಹೊಮ್ಮಿಸಬೇಕೆಂದರೆ ಸಂಸ್ಕೃತ ಭಾಷೆಯೊಂದೆ ಸಮರ್ಥ ವಾದುದು"—ಎಂದು ನ್ಯಾಯಮೂರ್ತಿಗಳು ೧೯೪೫ರಲ್ಲಿ 'ಭಾರತೀಯ ವಿದ್ಯಾಭವನ'ದ ಪದವೀದಾನ ಸಮಾರಂಭದಲ್ಲಿ ತಮ್ಮ ಅಧ್ಯಕ್ಷ ಭಾಷಣದಲ್ಲಿ ಹೇಳಿದ್ದಾರೆ. ಸಂಸ್ಕೃತದಲ್ಲಿ ಶಬ್ದಕೋಶವೂ ಸಹ ಮಂಜುಳವಾಗಿರುತ್ತದೆಂದು ಅವರ ಅಭಿಪ್ರಾಯ. 'ಇದಕ್ಕೆ ನನ್ನ ಸಂಸ್ಕೃತ ಮೋಹವು ಕಾರಣವಾಗಿರಬಹುದು' ಎಂದು ಅವರು ಒಪ್ಪಿ ಕೊಂಡರೂ ಸಂಸ್ಕೃತವು ಈಗ 'ಸ್ವರ್ಗಸ್ಥ' ಭಾಷೆ ಯಾಕಾಗಿದೆಯೆಂಬು ದಕ್ಕೆ ಸಮರ್ಪಕವಾದ ಕಾರಣಗಳನ್ನೂ ಕೊಟ್ಟು– ಈ ಗೀರ್ವಾಣ ಭಾಷೆ ದೇವತೆಗಳ ಹಾಗೆ ಸ್ವರ್ಗಸ್ಥವಾಗಿರದೆ ಜೀವಂತವಾಗಿ, ಇಂದಿನ ರಾಷ್ಟ್ರಭಾಷೆಯಾಗಬೇಕು, ಅದು ಆಗುವ ಬಗೆ ಹೇಗೆ ಎಂಬುದನ್ನೂ

ಸ್ಫುಟವಾಗಿ ಮಂಡಿಸಿದ್ದಾರೆ. 'ಮಧುರವಾಣಿ', 'ಸಂಸ್ಕೃತಂ' ಮೊದಲಾದ ಪತ್ರಿಕೆಗಳು ಇಂದು ಸಂಸ್ಕೃತವನ್ನು ಜೀವಂತ ಪಡಿಸುತ್ತಿವೆಯೆಂದಿದ್ದಾರೆ.

**'ಅಸ್ಯಾಮೇವ ಶತಾಬ್ದಾಯಾಂ ಸಂಸ್ಕೃತಮೇವ ರಾಷ್ಟ್ರಭಾಷಾ ಭವೇದಯಮೇವ ಸಂಸ್ಕೃತಸ್ಯ ದೇಶೋಽಸ್ತಿ'**—ಎಂಬ ವಾಕ್ಯವನ್ನು 'ಸಂಸ್ಕೃತಂ' ಪತ್ರಿಕೆಯಿಂದ ಉದ್ಧರಿಸಿಕೊಟ್ಟಿದ್ದಾರೆ.

'ವೈದಿಕ ಸಂಶೋಧನ ಮಂಡಳ'ದವರು ಋಗ್ವೇದ ಸಂಹಿತೆಯ ಮೂರನೆಯ ಸಂಪುಟದ ಪ್ರಕಟನೆಯ ಉದ್ಘಾಟನ ಸಮಾರಂಭದಲ್ಲಿ ನ್ಯಾಯಮೂರ್ತಿಗಳು ಮಾಡಿದ ಅಧ್ಯಕ್ಷ ಭಾಷಣವು ಮನೋರಂಜಕವಾಗಿದೆ. ಪ್ರಾರಂಭದಲ್ಲಿ ನ್ಯಾಯಮೂರ್ತಿಗಳ ಸರಳತನವನ್ನು ವ್ಯಕ್ತಗೊಳಿಸುವ ಸಾಲುಗಳಿವು:

"I sincerely wish that this honour had fallen on some vedic scholar who could have done better justice to the occasion (ಜಸ್ಟಿಸ್‌ರವರಿಗಿಂತ ಹೆಚ್ಚಿನ ಜಸ್ಟಿಸ್ ಯಾರು ಮಾಡಬಲ್ಲರು!). Though I would yield to none in the respect for the Vedas, I frankly admit that my critical study of the Rigveda is limited to Peterson's Selections, which was prescribed for my B. A. examination."

(ಇಂಥ ಪ್ರಸಂಗದಲ್ಲಿ ನನಗೆ ಸಲ್ಲಿಸಿದ ಈ ಗೌರವವು ಯಾರಾದರೊಬ್ಬ ವೇದಪಾರಂಗತರಿಗೆ ಸಿಕ್ಕಿದ್ದರೆ ಈ ಸಂದರ್ಭಕ್ಕೆ ಹೆಚ್ಚು ನ್ಯಾಯ ಮಾಡಿದ ಹಾಗಾಗುತ್ತಿತ್ತೆಂದು ನನ್ನಮನೋಭಿಮತವಿದೆ. ವೇದಗಳ ಬಗ್ಗೆ ನನ್ನಲ್ಲಿರುವ ಪೂಜ್ಯ ಭಾವನೆಯಲ್ಲಿ ಇನ್ನೊಬ್ಬರಿಗೆ ನಾನು ಮಣಿಯದಿದ್ದರೂ ನನ್ನ ಋಗ್ವೇದ ಅಭ್ಯಾಸವೆಂದರೆ ಬಿ.ಎ.ದಲ್ಲಿ ಪಠ್ಯವಾಗಿರುವ ಪೀಟರಸನ್ನನ ಸಂಗ್ರಹವಿಷ್ಟೆ ಎಂದು ನಾನು ಪ್ರಾಮಾಣಿಕತೆಯಿಂದ ಹೇಳುತ್ತೇನೆ.)

ಕೆಳಗಿನ ಮಾತುಗಳು ಇನ್ನೂ ಮನೋರಂಜಕವಾಗಿವೆ.

"Having come from an orthodox family and having imbibed the time-old orthodox idea that the Vedas are the monopoly of Brahmins, I was a bit discomfited to know that we had to study Vedas edited by a Christian. As I proceeded with the study, I found that the translation was by Wilson, the grammar was by Whitney, the commentary was by Oldenburg, the history was by MaxMuller, the essay on Rigveda was by Kaegi and the Dictionary of Rigveda was by Grassman and I merely exclaimed—'This is Kaliyuga.'"
(ಧಾರ್ಮಿಕ ಮನೆತನದಲ್ಲಿ ಹುಟ್ಟಿ ಬೆಳೆದು, ವೇದಗಳು ಬ್ರಾಹ್ಮಣರ ಸೊತ್ತು ಎಂಬ ತತ್ಕಾಲದ ಭಾವನೆಯನ್ನು ಮನದಟ್ಟಾಗಿಸಿಕೊಂಡು ಕ್ರಿಶ್ಚನ್ ಪಂಡಿತರಿಂದ ಸಂಪಾದಿಸಲ್ಪಟ್ಟ ವೇದಗಳನ್ನು ನಾವು ಪಠ್ಯವಾಗಿ ಅಭ್ಯಸಿಸಬೇಕೆಂಬುದು ನನಗೇಕೊ ಸರಿಹೋಗಲಿಲ್ಲ. ವೇದಗಳನ್ನು ಅಭ್ಯಾಸ ಮಾಡುತ್ತಲೆ ಅದರ ಭಾಷಾಂತರಕಾರ ವಿಲ್ಸನ್, ವೈಯಾಕರಣಿ ವ್ಹಿಟ್ನಿ, ಟೀಕಾಕಾರ ಓಲ್ಡೆನ್‌ಬರ್ಗ, ಇತಿಹಾಸ ಲೇಖಕ ಮ್ಯಾಕ್ಸಮ್ಯೂಲರ, ಋಗ್ವೇದ ಪ್ರಬಂಧಕಾರ ಕೇಗಿ, ಋಗ್ವೇದ ಕೋಶ ಕರ್ತ ಗ್ರಾಸಮನ್ ಎಂಬ ಹೆಸರುಗಳನ್ನು ಕೇಳಿ ನಾನು ಉದ್ಗಾರ ತೆಗೆದೆ—ಇದು ಕಲಿಯುಗ!)

ಈ ಸಂದರ್ಭದಲ್ಲಿ ನ್ಯಾಯಮೂರ್ತಿಗಳು ಮಾಡಿದ ಅಧ್ಯಕ್ಷೀಯ ಭಾಷಣ ಸಂಸ್ಕೃತ ಅಭ್ಯಾಸಿಗಳಿಗೆ, ಅಭಿಮಾನಿಗಳಿಗೆ, ಸಂಶೋಧಕರಿಗೆ ಸ್ಫೂರ್ತಿಯ ಘಟಿಕೆಯಾಗಿದೆ.

'ಸಮಗ್ರ ಋಗ್ವೇದ ಸಂಹಿತೆಯ ಅನುವಾದ ಯಾವ ಭಾರತೀಯ ಭಾಷೆಯಲ್ಲೂ ಇಲ್ಲ. ಜರ್ಮನಿ ಭಾಷೆಯಲ್ಲಿ ಎರಡು, ಇಂಗ್ಲೀಷಿನಲ್ಲಿ ಎರಡು, ಇವೆ'– ಎಂದು ಹೇಳುತ್ತ ಪಾಶ್ಚಾತ್ಯ ಪಂಡಿತರ ಜಿಜ್ಞಾಸೆ,

ವಿಮರ್ಶನ ವಿಚಕ್ಷಣತೆಗಳನ್ನೂ ಮನವಾರೆ ಹೊಗಳಿ—

"Is it not strange that the whole of Rigveda Samhita, with the Bhashya of Sayana should have been edited and published in England by a German Professor ?" ಎಂದು ಉದ್ಗಾರ ತೆಗೆದಿದ್ದಾರೆ.

(ಸಾಯಣನು ಭಾಷ್ಯ ಬರೆದ ಋಗ್ವೇದ ಸಂಹಿತೆಯನ್ನು ಇಂಗ್ಲಂಡದಲ್ಲಿ ಒಬ್ಬ ಜರ್ಮನ್ ಪಂಡಿತನು ಸಂಪಾದಿಸಬೇಕೆಂದರೆ ವಿಚಿತ್ರವಲ್ಲವೆ?)

ಋಗ್ವೇದವು ಒಂದಾನೊಂದು ಕಾಲಕ್ಕೆ ಬ್ರಾಹ್ಮಣರ ಸೊತ್ತಾಗಿತ್ತು. ವೇದಮಂತ್ರಗಳನ್ನು ಸರಾಗವಾಗಿ— ಕ್ರಮ, ಜಟಾ, ಘನ ಪ್ರಕಾರವಾಗಿ ಹೇಳುವ ವರ್ಗವೇ ಬೇರೆ ಆಗಿತ್ತು. ಆದರೆ 'ಅಪೌರುಷೇಯಾಃ ವೇದಾಃ' ಎಂಬ ಒಂದು ಬೀಗಮುದ್ರೆಯಿಂದ ಉಳಿದವರಿಗೆ ಅದು ಅಸ್ಪ್ರಶ್ಯವಾಗಿತ್ತು. ಮುಂದೆ ಪಾಶ್ಚಾತ್ಯ ಪಂಡಿತರ ಕೈಗೆ ಬಿದ್ದು ವೇದವು ಹೆಚ್ಚು ಹೆಚ್ಚು ಬೆಳಕಿಗೆ ಬಂತು—ಎಂದು ವಿವರವಾಗಿ ವಿಶದೀಕರಿಸುತ್ತ ಋಗ್ವೇದವು **ಈಲಿಯಡ್** ಮತ್ತು **ಓಡೆಸಿ** ಕೂಡಿಸಿದರೂ ಗಾತ್ರದಲ್ಲಿ ಮಿಕ್ಕುತ್ತಿದೆ. ಅದು ಜಗತ್ತಿಗೇ ಒಂದು ಸನಾತನ ಸ್ಮಾರಕವಾಗಿ ನಿಂತಿದೆಯೆಂದಿದ್ದಾರೆ. ಗ್ರೀಜವೋಲ್ಡನು ವೇದ ಸಾಹಿತ್ಯಕ್ಕಷ್ಟೆ ಅಲ್ಲ ಅಖಿಲ ಭಾರತೀಯ ಭಾಷೆಗಳಿಗೆ ಋಗ್ವೇದವು ಮೂಲಬೇರಾಗಿದೆ ಎಂದಿದ್ದಾನೆ.

('In Indian history, religion, philosophy and civilization, the Rigveda is a book of origins; as prophetic of the basis of future development, it may also be called a collection of first fruits.')

(ಭಾರತೀಯ ಇತಿಹಾಸ, ಧರ್ಮ, ತತ್ವಜ್ಞಾನ ಮತ್ತು ನಾಗರೀಕತೆಯಲ್ಲಿ ಋಗ್ವೇದವು ಮೂಲಮಾತೃಕೆಗಳ ಸಂಗ್ರಹವಾಗಿದೆ. ಭವಿಷ್ಯದ ಬೆಳೆವಣಿಗೆಯ ದ್ಯೋತಕವೆಂದರಿತು ಅದನ್ನು ಪ್ರಥಮ ಕೃತಿಗಳ ಫಲವೆಂದೂ ಕರೆಯಬಹುದು.)

ಲೋಕೂರ ಮನೆತನದಲ್ಲಿ ತಲೆತಲೆಯಿಂದ ಗಂಗೆಯಂತೆ ಇಳಿದು ಬಂದ ಸಂಸ್ಕೃತ ಪಾಂಡಿತ್ಯ ಪ್ರವಾಹವು ನಾರಾಯಣರಾಯರ ಹಿರಿಯ ಮಗಳು ಸೌ. ವನಮಾಲಾ ಇವರು ಬಿ. ಎ., ಎಂ. ಎ. ದಲ್ಲಿ ಪ್ರಥಮ ಶ್ರೇಣಿಯ ಶ್ರೇಯಸ್ಸಿನಲ್ಲಿ ಅವತರಿಸಿದೆಯೆಂದು ಹೇಳಬಹುದು. ನಾರಾಯಣರಾಯರು ಋಗ್ವೇದದ ಬಗ್ಗೆ ಮಾಡಿದ ಅಭ್ಯಾಸವೇ ವನಮಾಲಾ ಇವರಿಗೆ ಮಾರ್ಗದರ್ಶಿಯಾಗಿ ಅಮೋಘವಾದ ಕೀರ್ತಿಯನ್ನು ತಂದಿತು.

"ಬಿ. ಎ. ದಲ್ಲಿ ನಿಮಗೆ ಸಂಸ್ಕೃತದಲ್ಲಿ ಎಷ್ಟು ಗುಣಗಳು ಬಿದ್ದವು?" ನಾನು ಪ್ರಶ್ನೆಮಾಡಿದೆ. ನ್ಯಾಯಮೂರ್ತಿಗಳು ನಕ್ಕರು.

"ಮೊದಮೊದಲಿಗೆ ಸಂಸ್ಕೃತ ಓದಿದೆ. ಮುಂದೆ 'ಫಿಜಿಕ್ಸ–ಕೆಮಿಸ್ಟ್ರಿ' ತೆಗೆದುಕೊಳ್ಳಬೇಕಾಯಿತು", ಎಂದರು.

'ಸಂಗೀತಕಾರನು ಸರ್ಕಸ್ ಸೇರಿದ ಹಾಗಾಯಿತು'–ನಾನೆಂದು ಕೊಂಡೆ. ಆದರೆ ನ್ಯಾಯಮೂರ್ತಿಗಳಿಗೆ ಯಾವ ವಿಷಯವೂ ದುಃಸಾಧ್ಯವೆಂಬುದಿದ್ದಿಲ್ಲ.

"ಆ ವರುಷ 'ಫಿಜಿಕ್ಸ–ಕೆಮಿಸ್ಟ್ರಿ'ಯಲ್ಲಿ 'ನಾರಾಯಣ ವಾಸುದೇವ' ಪಾರಿತೋಷಕ ಪಡೆಯಬೇಕೆಂದು ನಾನು 'ಸಾಯಿನ್ಸ' ತೆಗೆದು ಕೊಂಡೆ."

"ನಾರಾಯಣ ವಾಸುದೇವ ಪಾರಿತೋಷಕವೆ?"

"ಹೌದು, ಆದರೆ ಪಾರಿತೋಷಕ ಸಿಗಲಿಲ್ಲ. ಬಿ. ಎ.ದಲ್ಲಿ ಉಚ್ಚವರ್ಗವೂ ಸಿಗಲಿಲ್ಲ."

"ಆಂ?"

"ಮತ್ತೇನು? ಸಬಂದ ಕೆಲವು ಪೇಪರಗಳಿಗೆ ಕೂಡದೇ ಇದ್ದ ಮೇಲೆ ಕ್ಲಾಸ ಬರುವುದು ಹೇಗೆ ಸಾಧ್ಯವಾಗಬೇಕು?"

"ಅಂದರೆ?"

ನ್ಯಾಯಮೂರ್ತಿಗಳು ಆ ಘಟನೆಯ ಬಗ್ಗೆ ಹೆಚ್ಚು ಮಾತನಾಡಲು ಇಷ್ಟಪಡಲಿಲ್ಲ. ವಸ್ತುಸ್ಥಿತಿಯನ್ನು ಬಹಿರಂಗಪಡಿಸುವ ಅಪೇಕ್ಷೆ ಅವರದಿರಲಿಲ್ಲ.

ಅಂತೂ ಪರಂಪರೆಯಿಂದ ಬಂದ ಸಂಸ್ಕೃತ ಪ್ರಾವೀಣ್ಯ, ಉದ್ದೇಶ ಪೂರ್ವಕವಾಗಿ ಪಡೆದ ವಿಜ್ಞಾನ ಪಾಂಡಿತ್ಯ, ಹಿರಿಯರ ಕಟ್ಟಾಯದಿಂದ ಕಾಲಿಟ್ಟರೂ ಅದನ್ನೇ ತಮ್ಮ ಗೆಲುವಿನ ನೆಲವನ್ನು ಮಾಡಿಕೊಂಡು ಅದರಲ್ಲಿಯೇ ಮೆರೆದ ನ್ಯಾಯಚಾತುರ್ಯ ಇಂತಹ ಬಹುವಿಧ ಸಂಪನ್ನತೆಯಿಂದ ನ್ಯಾಯಮೂರ್ತಿಗಳು ಬಹುಮುಖ ವಿಶಾರದರಾಗಿದ್ದಾರೆ. ಸಂಗೀತ ಕ್ಷೇತ್ರದಲ್ಲಿಯೂ ಅವರ ಜಿಜ್ಞಾಸೆ ಸುಳಿಯದೆ ಇಲ್ಲ. ಸಂಗೀತ ಪರಿಷತ್ತಿಗೆ ಅಧ್ಯಕ್ಷರಾಗಿ ಅಧಿಕಾರ ವಾಣಿಯಿಂದ ಮಾತನಾಡಿದ್ದಾರೆ. ಸಾಹಿತ್ಯ – ಸಂಗೀತ – ನ್ಯಾಯ – ವಿಜ್ಞಾನಗಳನ್ನು ವಶಪಡಿಸಿಕೊಂಡ ಚತುರ್ಮುಖ ಪ್ರಾವೀಣ್ಯ ಇವರದು. ಶಾಸ್ತ್ರದಲ್ಲಿ ಪಾಂಡಿತ್ಯವೆಷ್ಟೊ ಕಲೆಯಲ್ಲಿ ರಸಿಕತೆಯೂ ಅಷ್ಟೆ.

ಲೋಕೂರ ನಾರಾಯಣರಾಯರು ನ್ಯಾಯಮೂರ್ತಿಗಳಾದುದು ಹೇಗೆ? ಎಂಬ ಪ್ರಶ್ನೆಗೆ ಸುಲಭ ಉತ್ತರ ಸಿಕ್ಕಂತಿಲ್ಲ. ಸಾಹಿತ್ಯದಲ್ಲಿ ಒಲವು; ಪದವಿಗಾಗಿ ಅಭ್ಯಾಸಮಾಡಿದ್ದು ವಿಜ್ಞಾನ; ದೇಶಭಕ್ತನಾಗಬೇಕೆಂದು ಹಂಬಲಿಸುವ ಮನಸ್ಸು; ಪರಿಸ್ಥಿತಿಯ ಮೂಲಕ ಬಂದು ಪ್ರವೇಶಿಸಿದ್ದು ಸರಕಾರೀ ನ್ಯಾಯ ಕಚೇರಿ. "ನಾನು ಹೈಕೋರ್ಟ್ ಜಜ್ಜನಾಗಲಿಕ್ಕೆ ನನ್ನ ಕುಂಡಲಿಯೇ ಕಾರಣ"—ಎಂದು ಆ ದಿನದ (೧೬–೩–೪೭) ಸನ್ಮಾನ ಸಮಾರಂಭದಲ್ಲಿ ಸಾರಿಹೇಳಿದರು ನ್ಯಾಯಮೂರ್ತಿಗಳು. ಮನುಷ್ಯನ ಮಹತ್ವಾಕಾಂಕ್ಷೆಯಂತೆ ಆತನ ಭವಿಷ್ಯ ರೂಪತಾಳುತ್ತದೆಂದು ಹೇಳುತ್ತಾರೆ. ನ್ಯಾಯಮೂರ್ತಿಗಳು ಅಂದು ಹೇಳಿದರು—'ಏನೋ ಸರಕಾರೀ ನ್ಯಾಯಾಧೀಶನಾಗಿ ನಿಯಮಿಸಲ್ಪಟ್ಟೆ. ಒಂದೊಂದೆ ಮೇಲು ಮೆಟ್ಟಲು ಏರುವುದಕ್ಕೂ ಮೇಲಿನ ಮನೆ ತೆರವಾಗುವುದಕ್ಕೂ ಜೋಡಿಯಾಗುತ್ತಿತ್ತು. ಹೇಗೊ ಏರುತ್ತ ಏರುತ್ತ ನ್ಯಾಯಮೂರ್ತಿಯಾದೆ;' ಎಂದು ನ್ಯಾಯಮೂರ್ತಿಗಳೇನೊ ತಮ್ಮ ಉತ್ತರೋತ್ತರದ ಸಂಪೂರ್ಣ ಶ್ರೇಯಸ್ಸನ್ನು ತಮ್ಮ ಕುಂಡಲಿಗೇ ಕೊಟ್ಟರು. 'ಆ ಕುಂಡಲಿಗೆ ಕಾರಣ ನನ್ನ ತಾಯಿತಂದೆ' – ಸರಿ. 'ನಾಹಂಕರ್ತಾ ಹರಿಃ ಕರ್ತಾ' ಎಂಬ ವಿನಯದ ನಿರಹಂಕಾರದ ಮನೋವೃತ್ತಿ ನ್ಯಾಯಮೂರ್ತಿಗಳದಾದರೂ ಅವರಲ್ಲಿ ಒಂದು ಪ್ರತಿಭೆ

ಲೋಕೂರ ನಾರಾಯಣರಾಯರು



(ಬೆಳಗಾವಿಯಲ್ಲಿ ಪ್ರ್ಯಾಕ್ಟೀಸಿಗೆ ಪ್ರಾರಂಭವಾಯಿತು)

ಯೆಂಬುದಿಲ್ಲದೆ ಅವರು ಈ ಮಟ್ಟಕ್ಕೆ ಬಂದು ಮುಟ್ಟಿದರೆನ್ನಬೇಕೆ? ವಿನಯದ ಮುಸುಕಿನಲ್ಲಿ ವಿದ್ಯಾಸೂರ್ಯನನ್ನು ಮುಚ್ಚಿಟ್ಟರೂ, ಕೀರ್ತಿ ಕಿರಣದ ಪ್ರಭೆ ಸುಮ್ಮಸಿದ್ದೀತೆ?

೩

ನ್ಯಾಯಮೂರ್ತಿಗಳ ಪ್ರಾಥಮಿಕ ಶಿಕ್ಷಣ ಪ್ರಾರಂಭವಾದುದು ಅವರ ವಯಸ್ಸಿನ ಐದನೆಯ ವರುಷದಲ್ಲಿ. ಆಗ ಅವರ ತಂದೆ ಅಥಣಿ ಯಲ್ಲಿ ಶಿಕ್ಷಕರಾಗಿದ್ದರು. ಐದನೆಯ ವರುಷಕ್ಕೆ 'ಓನಾಮಾಸಿ' ಸುರು ವಾದರೆ ಎಂಟನೆಯ ವರುಷಕ್ಕೆ ಮಾಧ್ಯಮ ಶಾಲೆಯ ಮೂರನೆಯ ಇಯತ್ತೆಯನ್ನು ಮುಟ್ಟಿದ್ದರು. ಅಥಣಿ ಶಾಲೆ ಐದನೆಯ ಇಯತ್ತೆಯ ವರೆಗೆಯೇ ಇದ್ದುದು. ಊರು ಬಿಟ್ಟು ಪರಸ್ಥಳಕ್ಕೆ ಮುಂದಿನ ಅಭ್ಯಾಸ ಕ್ಕಾಗಿ ಚಿರಂಜೀವನೊಬ್ಬನನ್ನೇ ಕಳಿಸಲು ಪಿತೃಹೃದಯಕ್ಕೆ ಸಾಧ್ಯ ವಾಗಲಿಲ್ಲ. ಮುಂದಿನ ವರುಷ ಅಥಣಿಯಲ್ಲೇ ಆರನೆಯ ವರ್ಗ ತೆರೆಯಿತು. ಮರುವರುಷ ಏಳನೆಯ ವರ್ಗವೂ ಆಯಿತು. ೧೯೦೧ರಲ್ಲಿ 'ನಾನಾ' ಮ್ಯಾಟ್ರಿಕ್ ಪಾಸಾದರು. ಆಗ ಅವರಿಗೆ ವಯಸ್ಸು ಹದಿನಾಲ್ಕು ಮಾತ್ರ.

ಕಾಲೇಜ ಶಿಕ್ಷಣ ಪ್ರಾರಂಭವಾಯಿತು. ಪುಣೆಯ ಡೆಕ್ಕನ್ ಕಾಲೇಜಿನ ಹಾಸ್ಟೆಲ್‌ನಲ್ಲಿ ಸ್ಥಳ ಸಿಗಲಿಲ್ಲ. ಮುಂಬಯಿ ವಿಲ್ಸನ್ ಕಾಲೇಜಿಗೆ ಹೆಸರು ಹಚ್ಚಿದರು. ಮುಂಬಯಿ ಹವಾಮಾನ ಆರೋಗ್ಯಕ್ಕೆ ಸರಿಹೋಗಲಿಲ್ಲ. ಪುಣೆಯಲ್ಲಿ ಹಾಸ್ಟೆಲಿನಲ್ಲಿ ಪ್ರವೇಶವೂ ಸಾಧ್ಯ ವಾಯಿತು. ಬಿ. ಎ. ಪುಣೆಯಿಂದಲೇ ಆಯಿತು. ೧೯೦೭ರಲ್ಲಿ ಎಲ್‌ಎಲ್. ಬಿ. ಮುಗಿಯಿತು. ಎರಡನೆಯ ವರ್ಗದಲ್ಲಿ ತೇರ್ಗಡೆ ಹೊಂದಿದರು.

ಬೆಳಗಾವಿಯಲ್ಲಿ ಪ್ರ್ಯಾಕ್ಟೀಸಿಗೆ ಪ್ರಾರಂಭವಾಯಿತು. ಶೀಘ್ರ ದಲ್ಲಿಯೇ ಬೆಳಗಾವಿಯ ಸರಕಾರಿ ವಕೀಲರ ಗೌರವ ಸಹಾಯಕರಾಗಿ ನಿಯಮಿಸಲ್ಪಟ್ಟರು. ಕೆ. ಜಿ. ಅಜರೆಕರ, ಡಿ. ಫಿ. ಬೆಳವಿ ಈ ಉಭಯ ತರೂ ಮುಳುಗು ಹಾಕಲಿಕ್ಕೆ ಬಾರದವನಿಗೆ ಬೆಂಡುಕೊಟ್ಟು, ಈಸು ಕಲಿ ಸುವ ಹಾಗೆ ಹೊಸ ವಕೀಲರನ್ನು ತರಬೇತು ಮಾಡಿದರು. ಹೊಸ

ವಕೀಲರ ವೃತ್ತಿ ಉತ್ಕರ್ಷ ಹೊಂದುತ್ತ ಏರತೊಡಗಿತು. ಬೆಳಗಾವಿಯಲ್ಲಿ ಚಿರಂಜೀವರ ವಕೀಲಿ, ಅಥಣಿಯಲ್ಲಿ ತೀರ್ಥರೂಪರ ವಕೀಲಿ; ಶಿಕ್ಷಕ ವೃತ್ತಿಯನ್ನು ಬಿಟ್ಟುಕೊಟ್ಟು ಅವರೂ ವಕೀಲಿಯನ್ನೇ ಪ್ರಾರಂಭಿಸಿದ್ದರು.

ಸಂಸಾರರಥ ಸುಗಮವಾಗಿ ಸಾಗಿದೆಯೆನ್ನುವಾಗಲೆ ಗತಿ ಕುಂಠಿತವಾಗಿರುತ್ತದೆ. ತಂದೆ ರಾಮರಾಯರಿಗೆ ನಾಲ್ವತ್ತು ವಯಸ್ಸು ಕೂಡ ಆಗಿರಲಿಲ್ಲ. ಶೂರ್ಪಾಲಿಗೆ ಅಲ್ಲಿಯ ಮ್ಯಾಜಿಸ್ಟ್ರೇಟರ ಎದುರು ಕ್ರಿಮಿನಲ್ ಖಟ್ಲೆ ನಡೆಸುವುದಕ್ಕಾಗಿ ಹೋದರು. ಅಲ್ಲಿಯೇ ಕಾಲರಾ ಜೇನೆ ಬಂತು. ಹಿರಿಯರು ಅದೇ ಬೇನೆಗೆ ತುತ್ತಾದರು. ಚಿಕ್ಕವರಾಗಿದ್ದ ನಾರಾಯಣರಾಯರೇ ರಥದ ಲಗಾಮು ಹಿಡಿಯಬೇಕಾಯಿತು. ಮೂವರು ತಮ್ಮಂದಿರು, ಇಬ್ಬರು ತಂಗಿಯರು. ಕೊನೆಯ ತಮ್ಮನೆಂದರೆ ಕೆಲವು ತಿಂಗಳದ ಮಗು ಮಾತ್ರ; ವಿತಂತು ತಾಯಿ ಎಲ್ಲರನ್ನೂ ಕರೆದುಕೊಂಡು ಬೆಳಗಾವಿಗೇ ಬಂದರು. ಸೋತ ಕೈಯಿಂದಲೆ ನಾವಿಗೆ ಹುಟ್ಟು ಹಾಕಲು ತೋಳೇರಿಸಿದರು. ದುಃಖವು ಯಾವಾಗಲೂ ಗುಳಿಯೆತ್ತಿಯೇ ಬರುತ್ತದೆ. ರಾಯರ ಧರ್ಮಪತ್ನಿ ಯಮುನಾಬಾಯಿ, ರಾಯರ ತೀರ್ಥರೂಪರು ತೀರಿದ ಹನ್ನೊಂದು ತಿಂಗಳ ಮೇಲೆ ಒಂದು ಗಂಡುಮಗು (ಭೀಮರಾವ್ ಉರ್ಫ್ ದಾದಾಸಾಹೇಬ)ವನ್ನು ಹೆತ್ತು ಕಣ್ಮರೆಯಾದರು. ಮುಂದೆ ಮೂರು ತಿಂಗಳಲ್ಲಿ ಅವರ ತಮ್ಮ (ಡಾ. ಆರ್. ಎನ್. ಲೋಕೂರ)ನ ಧರ್ಮಪತ್ನಿಯೂ ಕಾಲವಾದರು. ರಾಯರ ತಾಯಿ ಸೀತಾಬಾಯಿ ಇದರಿಂದ ಹೊಟ್ಟೆಬೇನೆ ಹಚ್ಚಿಕೊಂಡು ೧೯೧೦ನೆಯ ಸಪ್ಟಂಬರದಲ್ಲಿ ಅವರೂ ಕಣ್ಮರೆಯಾದರು! ಅಂತೂ ೧೯೧೦ನೆಯ ಫೆಬ್ರುವರಿಯಿಂದ ಅದೇ ವರುಷದ ಸಪ್ಟಂಬರದ ವರೆಗೆ ಮೂರು ಜೀವಗಳು, ತತ್ಪೂರ್ವದಲ್ಲಿ ಒಂದು ವರುಷದ ಹಿಂದೆ, ಒಂದು ಹಿರಿಯ ಜೀವ—ಹೀಗೆ ಮಾರಾರು ತಿಂಗಳಲ್ಲಿ ಮನೆಯೆಂದರೆ ಸಾವಿನ ಸೆರೆಮನೆಯಾಯಿತು. ಇಷ್ಟೆಲ್ಲಾ ಕಹಿಯನ್ನೂ ರಾಯರು ನುಂಗಿದರು. ಅರಗಿಸಿಕೊಂಡರು. ನಂಜನ್ನೂ ನುಂಗಿ 'ನಂಜುಂಡ' ರಷ್ಟೆ ಆಗಲಿಲ್ಲ. ಆ ನಂಜನ್ನೇ ಅಮೃತಗೊಳಿಸಿ ತಮ್ಮ ನಾಳಿನ ಬಾಳ

ಬಳ್ಳಿಗೆ ನೀರೆರೆದರು. ಬಳ್ಳಿ ಮತ್ತೆ ಕುಡಿಬಿಟ್ಟಿತು.

೧೯೧೦ನೆಯ ಮೇ ತಿಂಗಳಿನಲ್ಲಿ ನಾರಾಯಣರಾಯರು ಈಗಿನ ಸಹಧರ್ಮಿಣಿ – ಸೌಭಾಗ್ಯವತಿ ಲಕ್ಷ್ಮೀಬಾಯಿಯವರ ಪಾಣಿಗ್ರಹಣ ಮಾಡಿದರು.

ಸಂಸ್ಕೃತ ಅಭ್ಯಾಸವೇ ರಾಯರ ಜೀವನದ ಸಂಜೀವಿನಿಯಾಗಿತ್ತು. ಇಂತಹ ಸಂಸ್ಕೃತ ವಿಷಯವನ್ನು ಬಿ. ಎ. ಗಾಗಿ ತೆಗೆದುಕೊಳ್ಳದೆ ಹೋದುದಕ್ಕೆ ರಾಯರು ಮಮ್ಮಲ ಮರುಗಿದರು. ಏನೋ ಒಂದು ಹವ್ಯಾಸದಿಂದ ಬಿ. ಎ. ದಲ್ಲಿ ವಿಷಯ ಬದಲಿಸಬೇಕಾಗಿ ಬಂದುದು, ಅದರಲ್ಲಿ ಯಶಸ್ಸು ಸಿಗದೆ ಹೋದುದು ಜೀವನದಲ್ಲಿ ಅತೃಪ್ತಿಯನ್ನು ತಂದಿದ್ದರೆ ಪುನಃ ಸಂಸ್ಕೃತದ ಪಾರಾಯಣವೊಂದೆ ಈ ಅತೃಪ್ತಿಯನ್ನು ಕಳೆಯಬಲ್ಲುದೆಂದು ಅವರಿಗೆನಿಸಿತು. ಕಾಯಿದೆ ಓದುವುದೂ ಮುಗಿಯಿತು. ಜೀವನದ ಕಷ್ಟನಷ್ಟಗಳ ಕಹಿಯೂ ಬದುಕನ್ನು ಬೇಸರ ಪಡಿಸಿತ್ತು. ಐನಾಪುರದ ವೆಂಕಟಾಚಾರ್ಯ ಮಂಗಸೂಳಿ ಎಂಬವರು ಮಾರ್ಗದರ್ಶಿಗಳಾಗಿ ದೊರಕಿದರು. ರಾಯರ ಸಂಸ್ಕೃತ ಅಭ್ಯಾಸ ಅವ್ಯಾಹತವಾಗಿ ಸಾಗಿತು, ಮುಂದು ಮುಂದರಿಯಿತು. ಬಾದರಾಯಣಾಚಾರ್ಯ ಕಟ್ಟಿಯೆಂಬವರು ರಾಯರ ಕುಲಪುರೋಹಿತರು. ಮಧ್ವ ಸಿದ್ಧಾಂತದಲ್ಲಿ ವಿಷ್ಣಾತರು. ರಾಯರ ಸಂಸ್ಕೃತ ಅಭ್ಯಾಸದಲ್ಲಿ ಅವರು ಒಳ್ಳೇ ನೆರವು ನೀಡಿದರು. ಸಂಸ್ಕೃತ ಪದ್ಯಗಳಿಗೆ ವ್ಯಾಖ್ಯಾನ ಬರೆಯಲು ಸಹಾಯ ಮಾಡಿದರು. ‘ಜಾನಕೀ ಹರಣ’, ‘ಬುದ್ಧ ಚರಿತ’ಗಳ ಮೇಲೆ ಸಂಸ್ಕೃತ ವ್ಯಾಖ್ಯಾನ, ಇಂಗ್ಲೀಷ ಟಿಪ್ಪಣಿಗಳನ್ನು ರಾಯರು ಬರೆದರು. ‘ಸಂಸ್ಕೃತ ಚಂದ್ರಿಕೆ’ಯ ಸಂಪಾದಕರು ಸಂಗ್ರಹಿಸಿದ ಮಹಾಭಾರತ ಸಂಕಲನಕ್ಕೆ ‘ನಾನಾ’ ಉಪೋದ್ಘಾತ ಟಿಪ್ಪಣಿಗಳನ್ನು ಬರೆದರು. ಅದರ ಮೂಲಕ ಮಹಾಭಾರತದ ಆವೃತ್ತಿ ಲೋಕಪ್ರಿಯವಾಯಿತು.

ಜೀವನದ ವಿಷಮಕಾಲದಲ್ಲಿ ಸಂಸ್ಕೃತವು ರಾಯರ ಬದುಕಿನಲ್ಲಿ ಸವಿ ಬೆರಸುತ್ತ ಬಂದಂತೆ, ರಾಯರ ವಕೀಲಿ ವ್ಯವಸಾಯ ಅವರ ಆರ್ಥಿಕ ಸಂಪತ್ತಿಯನ್ನೂ, ಸಾಮಾಜಿಕ ಗೌರವವನ್ನೂ ಹೆಚ್ಚಿಸಿತು.

ರಾಯರಿಗೆ ಮೂರು ಸಲ ಸರಕಾರದವರು ಸಬ್‌ಜಜ್ಜರಾಗಲು ಕೇಳಿಕೊಂಡರು. ರಾಯರು ಇಷ್ಟಕ್ಕೆ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡು ಸರಕಾರಿ ನೌಕರಿಮಾಡಲಿಕ್ಕೆ ಸಿದ್ಧರಾಗಲಿಲ್ಲ. ಇತ್ತ ಮೂರನೆಯ ಸಲ ಸಬ್‌ಜಜ್ಜ ಕರೆಬಂದಿತ್ತು; ಅತ್ತ ರಾಯರು ಕಾಂಗ್ರೆಸ್ ಪ್ರತಿನಿಧಿಯಾಗಿ ಲಖನೌಗೆ ಹೋಗಿದ್ದರು.

"ರಾಯರು ಸರಕಾರಿ ನೌಕರಿ ಸ್ವೀಕರಿಸಿ ನ್ಯಾಯಮೂರ್ತಿಗಳಾಗದೆ ತಮ್ಮ ವಕೀಲಿವ್ಯವಸಾಯ ಹಾಗೂ ದೇಶಕಾರ್ಯವನ್ನು ನಡಸಿಕೊಂಡು ಬಂದಿದ್ದರೆ ಇಂದು ಅವರು ಕಾಂಗ್ರೆಸ್ ವರ್ಕಿಂಗ ಕಮಿಟಿಯ ಸದಸ್ಯರಾಗುತ್ತಿದ್ದರೆಂಬಲ್ಲಿ ಸಂಶಯವಿಲ್ಲ. ಕರ್ನಾಟಕದಿಂದ ಕಾಂಗ್ರೆಸ್ ವರ್ಕಿಂಗ ಕಮಿಟಿಯಲ್ಲಿ ಯಾರೂ ಪ್ರತಿನಿಧಿಗಳಿಲ್ಲವೆಂಬ ಕೊರತೆ ಬಹುಶಃ ದೂರಾಗಬಹುದಾಗಿತ್ತು," ಎಂದು ಕರ್ನಾಟಕ ಸಂಘದ ಕಾರ್ಯದರ್ಶಿಗಳು ನ್ಯಾಯಮೂರ್ತಿಗಳ ಸತ್ಕಾರ ಸಭೆಯಲ್ಲಿ ಮಾತನಾಡಿದುದು ಅರ್ಥಪೂರ್ಣವಾಗಿದೆ.

೧೯೧೮ರಲ್ಲಿ ರಾಯರು ಸರಕಾರಿ ವಕೀಲರು ಮತ್ತು ಪಬ್ಲಿಕ್ ಪ್ರಾಸಿಕ್ಯೂಟರರು ಆಗಬೇಕೆಂದು ಗೊತ್ತಾಯಿತು. ರಾಯರು ಒಪ್ಪಿಕೊಳ್ಳಲೇ ಬೇಕಾಯಿತು. ಮುಂದೆ ಅದೇ ವರುಷ ಸಾತಾರೆಯ ಆಸಿಸ್ಟಂಟ ಜಜ್ಜರಾದರು. ೧೯೩೫ರಲ್ಲಿ ನಾಸೀಕಕ್ಕೆ ಜಿಲ್ಹಾನ್ಯಾಯಾಧೀಶರಾಗಿ ನಿಯಮಿಸಲ್ಪಟ್ಟರು. ಮುಂದೆ ಅಕ್ಟೋಬರದಲ್ಲಿ ಜಳಗಾಂವಿಗೆ ಸ್ಥಳಾಂತರ ಹೊಂದಿದರು. ಅಲ್ಲಿಯೇ ಪೂರ್ವಖಾನದೇಶದ ಹೊಸ ಜಿಲ್ಹಾ ನ್ಯಾಯಕಚೇರಿಯು ಇವರ ಹಸ್ತದಿಂದ ತೆರೆಯಲ್ಪಟ್ಟಿತು.

"ಶ್ರೀ. ಲೋಕೂರ ಅವರ ಕೈಯೊಳಗಿನ ನ್ಯಾಯದ ತಕ್ಕಡಿಯು ಪಕ್ಷಪಾತದಿಂದಾಗಲಿ ಇಲ್ಲವೆ ಪೂರ್ವಗ್ರಹದಿಂದಾಗಲಿ ಕೂದಲೆಳೆಯಷ್ಟಾದರೂ ಅತ್ತಿತ್ತ ಹೊಯ್ದಾಡದು," ಎಂದು ನ್ಯಾಯಮೂರ್ತಿಯ ಪರಿಚಯಕಾರರೊಬ್ಬರು ಒಂದು ಮರಾಠಿ ಪತ್ರಿಕೆಯಲ್ಲಿ ಬರೆದಿದ್ದಾರೆ. ಕನ್ನಡ ನ್ಯಾಯಾಧೀಶರ ನಿಷ್ಪಕ್ಷಪಾತ ಮನೋವೃತ್ತಿಯ ಬಗ್ಗೆ ಒಬ್ಬ ಮರಾಠೀ ಲೇಖಕರು ಬರೆದಿರುವುದಕ್ಕೆ ಮಹತ್ವವಿದೆ.

ನ್ಯಾಯಾಧೀಶರು ತೀರ್ಪನ್ನು ಹೇಗೆ ಕೊಡುತ್ತಾರೆ? ಪಾಪ ಒಬ್ಬ

ಬಡ ಜೀವಿಯ ಜೀವನವನ್ನು ಹಾನಿಗೊಳಿಸಿದೆನಲ್ಲ–ಎಂದು ಅವರಲ್ಲಿ ಕನಿಕರ ಹುಟ್ಟಲಿಕ್ಕಿಲ್ಲವೇ?

ಒಮ್ಮೆ ರಾಯರ ಬದ್ದಿ ಮನೆಗೆ ಹೋಗಿದ್ದೆ– ರಾಯರ ಸಂದರ್ಶನವನ್ನು ತೆಗೆದುಕೊಳ್ಳಬೇಕೆಂಬ ಇಚ್ಛೆಯಿಂದ. ರಾಯರು ಬಂದು ನನ್ನ ಬಳಿಗೆ ಒಂದೇ ಆರಾಮಾಸನದಲ್ಲಿ ಕುಳಿತರು.

"ನಿಮಗೆ ಕೆಲವು ಪ್ರಶ್ನೆಗಳನ್ನು ಕೇಳಬೇಕೆಂದಿದ್ದೇನೆ" ನಾನೆಂದೆ.

"ಆಗಬಹುದು", ಅವರೆಂದರು.

"ನೀವು ಅನೇಕರಿಗೆ ಫಾಶಿ ಶಿಕ್ಷೆ ಕೊಟ್ಟಿರಬಹುದಲ್ಲವೆ?"

"ಕೊಡದೆ ಏನು?''

"ನ್ಯಾಯಾಧೀಶನು ಮಾನವ ಸಹಜವಾದ ಭಾವನೆಯ ಸೆಳವಿಗೆ ಬೀಳಬಹುದಲ್ಲವೆ?"

"ನ್ಯಾಯಾಧೀಶನು ಗಟ್ಟಿಗನಾಗಿದ್ದರೆ ಭಾವನಾವೇಶಕ್ಕೆ ಒಳಗಾಗುವದಿಲ್ಲ."

"ಒಬ್ಬನ ಬಗ್ಗೆ ಫಾಶಿ ಶಿಕ್ಷೆಯ ನಿರ್ಣಯ ಸಾರಬೇಕಾದರೆ ನಿಮಗೆ ಕನಿಕರ ಬರುವುದಿಲ್ಲವೆ?"

"ಬರಬಹುದು" ರಾಯರು ತಕ್ಕಡಿ ಹಿಡಿದುಕೊಂಡೇ ಮಾತನಾಡುತ್ತಿದ್ದರು. ಮುಳ್ಳು ಅತ್ತಿತ್ತ ಒಲಿದಾಡುತ್ತಿರಲಿಲ್ಲ.

ರಾಯರು ಒಂದು ಚಿಕ್ಕ ಸಂಗತಿ ಹೇಳಿದರು:

"ಒಮ್ಮೆ ಒಬ್ಬ ಆರೋಪಿಗೆ ಫಾಶಿ ಶಿಕ್ಷೆ ಕೊಡಬೇಕೆಂದು ನಿರ್ಧಾರವಾದಂತಾಯಿತು. ಮನೆಗೆ ಬಂದು ನಮ್ಮ ಶ್ರೀಮತಿಗೆ ಹೇಳಿದೆ–ಒಂದು ಆಹುತಿ ಕೊಳ್ಳಬೇಕಾಯಿತು ಎಂದು. ಅಂದು ರಾತ್ರಿಯೆಲ್ಲ ನನಗೆ ನಿದ್ದೆಯಿಲ್ಲ. ತಲೆಯಲ್ಲಿ ಆ ವ್ಯಕ್ತಿಯು ನ್ಯಾಯ ವಿಚಾರದ ಜಾಳಿಗೆಯಲ್ಲಿ ಮನಸ್ಸು ಜೇಡದಂತೆ ಸಿಕ್ಕಿಕೊಂಡಿತ್ತು. ವಿಚಾರದ ತಾಕಲಾಟವೇ ತಾಕಲಾಟ. ಕೊನೆಗೊಮ್ಮೆ ಒಂದು ವಿಚಾರ ಹೊಳೆಯಿತು. ಆರೋಪಿಯ ಹೆಂಡತಿಯೂ ಗುನ್ಹೆಗೆ ಸಾಮಿಲಾಗಿರಬೇಕೆಂದು ಆಧಾರ ದೊರೆಯಿತು. ಕೂಡಲೆ ಚೀಫ ಜಜ್ಜರ ಕಡೆಗೆ ಹೋದೆ. ಆರೋಪಿಯ ಫಾಶೀ ಶಿಕ್ಷೆಯನ್ನು ತಿರುಗಿ ತೆಗೆದುಕೊಳ್ಳು

ತ್ತೀನಿ ಎಂದೆ. 'ನಿಮ್ಮ ಹೊಣೆ! ನಿಮಗೆ ಹೇಗೆ ಸರಿಯೆನಿಸುತ್ತದೋ ಹಾಗೆ'–ಎಂದರು. ಮರುದಿನ ಆರೋಪಿಯು ಕುತ್ತಿಗೆಗೆ ಬಂದಿದ್ದ ಉರುಲು ಸಡಿಲಾಯಿತು.''

''ಅಂತೂ ಆತನ ಆಯುಷ್ಯ ಗಟ್ಟಿಯಾಗಿತ್ತು," ನಾನೆಂದೆ.

"ಸುಳ್ಳಲ್ಲ. ನಮ್ಮ ಕೈಯೊಳಗೇನಿದೆ. ಇಂದು ದೇಹಾಂತಶಿಕ್ಷೆ ವಿಧಿಸಿದರೂ, ನಾಳೆ ಒಬ್ಬನು ಉಳಿದುಕೊಳ್ಳುತ್ತಾನೆ. ಅವನನ್ನು ಕಾಪಾಡಿದವನು ನ್ಯಾಯಾಧೀಶನಲ್ಲ, ನಾರಾಯಣ." ರಾಯರೆಂದರು.

"ನಾರಾಯಣನೇ ನ್ಯಾಯಾಧೀಶನಾಗಿ ರಕ್ಷಿಸುತ್ತಾನೆ. ನರನಲ್ಲಿ ನಾರಾಯಣನು ಇದ್ದೇ ಇರುತ್ತಾನೆ, ತೋರಿಸಿಕೊಳ್ಳುವುದು ಅಪರೂಪ'' – ನಾನೆಂದೆ.

''ಖಟ್ಲೆಗಳೆಲ್ಲವೂ ಹೆಣ್ಣಿನ ತೊಡಕಿನವೇ ಇರುತ್ತವಲ್ಲವೆ?"

"ನಿಮ್ಮಂತಹ ಲೇಖಕರಿಗೆ ಕಾದಂಬರಿ ಬರೆಯಬೇಕೆಂದರೆ ಬೇಕಾದಷ್ಟು ಕಥಾವಸ್ತು ಸಿಗುತ್ತದೆ ನಮ್ಮಲ್ಲಿ", ಎಂದು ರಾಯರು ನುಡಿದು ನಕ್ಕರು. ಒಂದು ಹೆಣ್ಣಿನ ತೊಡಕಿನ ಒಂದು ವಿಚಿತ್ರ ಕಥೆ ಹೇಳಿದರು. ಕೇಳಿ ಮೈ ಜುಂ ಎಂದಿತು.

"ನೀವು ರಾಷ್ಟ್ರೀಯ ಕೈದಿಗಳನ್ನು ಟ್ರಯ್ ಮಾಡಿದ್ದೀರಾ?''

"ಇಲ್ಲ"ವೆಂದು ಉತ್ತರಕೊಟ್ಟರು.

ಆದರೆ ೧೯೩೦ರ ಚಳುವಳಿಯಲ್ಲಿ ಘಟಿಸಿದ ಒಂದು ಸಂಗತಿಯನ್ನು ಹೇಳಿದರು. ಬಹಳ ಮನೋರಂಜಕವಾಗಿ ತೋರಿತು.

೧೯೩೦ರ ಸಾಲಿನಲ್ಲಿ, ದೇಶದ ತುಂಬೆಲ್ಲ ಕಾಯಿದೆಭಂಗ ಚಳುವಳಿಯೋ ಚಳುವಳಿ. ಅಷ್ಟೇ ಜೋರಿನಿಂದ ಸರಕಾರದ ದಬ್ಬಾಳಿಕೆ. ಆರ್ಡಿನನ್ಸ ಇಲ್ಲವೆ ಕಪ್ಪು ಕಾಯಿದೆಯ ಮೇಲೆ ಕಪ್ಪು ಕಾಯಿದೆಗಳು. ಇಷ್ಟೇ ಅಲ್ಲ, ಪೋಲೀಸ ಅಧಿಕಾರಿಗಳಿಗೂ ಕೂಡ ಶಾಂತಿರಕ್ಷಣೆಗೆಂದು ಹೆಚ್ಚಿನ ಅಧಿಕಾರ ದೊರಕಿತ್ತು. ಅಹಮ್ಮದಾಬಾದ ಡಿಸ್ಟ್ರಿಕ್ಟ ಸುಪರಿಂಟೆಂಡ್ ಆಫ್ ಪೋಲೀಸ್‌ರು ನಾಗರಿಕರು ರಾಷ್ಟ್ರಧ್ವಜ ಹಚ್ಚಕೂಡದೆಂದೂ, ಧ್ವಜವಂದನೆ ಮಾಡಕೂಡದೆಂದೂ ಹುಕುಂ ಹೊರಡಿಸಿದ್ದರು. ಧ್ವಜವಂದನೆಯ ಮೂಲಕ ಶಾಂತತಾ ಭಂಗವಾಗುವು

ದೆಂದು ಖಾಸಗಿ ಸ್ಥಳಗಳಲ್ಲಾಗಲಿ, ಸಾರ್ವಜನಿಕ ಸ್ಥಳಗಳಲ್ಲಾಗಲಿ ಧ್ವಜವಂದನೆ, ಧ್ವಜಸ್ಥಾಪನೆ ಮಾಡಕೂಡದೆಂದು ಸರಕಾರದ ಕಟ್ಟಪ್ಪಣೆ ಯಾಗಿತ್ತು. ಇಂತಹ ಪರಿಸ್ಥಿತಿಯಲ್ಲಿ ಅಹಮ್ಮದಾಬಾದಿನ ಒಬ್ಬ ರಾಷ್ಟ್ರೀಯ ಪುಢಾರಿಗಳು-ಅವರೊಬ್ಬ ಪ್ರಸಿದ್ಧ ಡಾಕ್ಟರರು-ತಮ್ಮ ಮನೆಯ ಮುಂದೆ ಮೂರುಬಣ್ಣದ ಬಾವುಟವನ್ನು ಹಾರಾಡಿಸಿದರು. ಪೋಲೀಸರು ಅವರ ಮೇಲೆ ಖಟ್ಲೆ ಹಾಕಿದರು. ಸರಕಾರಿ ಹುಕುಂ ಮೀರಿದರೆಂದು ಭರಪೂರ ಶಿಕ್ಷೆಯಾಯಿತು. ಮುಂದೆ ಅಲ್ಲಿಯ ಡಿಸ್ಟ್ರಿಕ್ಟ ಜಜ್ಜರಾದ ಲೋಕೂರ ಅವರ ಕಡೆಗೆ ನ್ಯಾಯ ವಿಚಾರಣೆ ಬಂತು. ಡಿಸ್ಟ್ರಿಕ್ಟ ಜಜ್ಜರು ಮೂಲಕ್ಕೇ ಕೈಹಾಕಿದರು. ಡಿ.ಎಸ್.ಪಿ. ಅವರ ಹುಕುಮೇ ಕಾಯಿದೆ ವಿರುದ್ಧವಾಗಿದೆಯೆಂದು ಆಧಾರಪೂರ್ವಕ ವಾಗಿ ಹೇಳಿದರು. ಖಾಸಗಿ ಸ್ಥಳಗಳಲ್ಲಿ ಧ್ವಜನಿಲ್ಲಿಸುವುದನ್ನು ತಡೆ ಯುವುದಕ್ಕೆ ಯಾವ ಪೋಲೀಸ ಅಧಿಕಾರಿಗೂ ಅಧಿಕಾರವಿಲ್ಲವೆಂದು ಸಾರಿದರು. ಪ್ರಸ್ತುತದಲ್ಲಿ ಖಟ್ಲೆಹಾಕಲಾಗಿದ್ದ ದೇಶಭಕ್ತರನ್ನೂ ಸದ್ಯ ದಲ್ಲೇ ಬಿಡುಗಡೆ ಮಾಡಬೇಕೆಂದು ಮೇಲಕ್ಕೆ ಬರೆದರು. ಮುಂಬಯಿ ಹಾಯಕೋರ್ಟಿನವರು ಜಿಲ್ಹಾನ್ಯಾಯಾಧೀಶರ ತೀರ್ಪನ್ನು ಮನಗಂಡು ದೇಶಭಕ್ತರನ್ನು ಬಂಧ ಮುಕ್ತಮಾಡಿದರು. ಸರಕಾರಿವತಿಯಿಂದ ನಡೆಯಿಸುವ ಖಟ್ಲೆಗಳನ್ನು ಸರಕಾರಿನ್ಯಾಯಾಧೀಶರು ಸರಕಾರದ ಯಾವದೇ ಕೃತಿ ಕಾಯಿದೆವಿರುದ್ಧವೆಂದು ಪ್ರಮಾಣಿಸಿ ತೋರಿಸ ಲಾರರು. ಮೇಲಿನವರ ಅವಕೃಪೆಗೆ ಎಲ್ಲಿ ಸಿಕ್ಕುವೆವೊ ಎಂಬ ಭೀತಿ, ಸರಕಾರದ ಯಾವದೇ ಕೃತಿ ಕಾಯಿದೆಸೀರವೇ ಇರುತ್ತದೆಂಬ ನಂಬಿಕೆ, ಇದರಿಂದ ಜನತಾದೃಷ್ಟಿಯಿಂದ ನೋಡುವಲ್ಲಿ ಕಣ್ಣು ತಾನೇ ಮುಸಕಾ ಗುವದುಂಟು. ನ್ಯಾಯಮೂರ್ತಿಗಳು ನಿರ್ಣಯದಲ್ಲಿ ಯಾವದೊಂದು ನಿಚ್ಚಳವಾದ ನಿಷ್ಪಕ್ಷಪಾತವಾದ ದೃಷ್ಟಿಯಿಂದ ನೋಡುತ್ತಿದ್ದರೆಂಬುದಕ್ಕೆ ಮೇಲಿನ ಉದಾಹರಣೆ ಸಾಕ್ಷಿಯಾಗಿದೆ. ಇಷ್ಟೇ ಅಲ್ಲ. ಇದೇ ಪ್ರಕಾರ ಒಂದು ವಿಷಯ ಇದೇ ಕಾಲಕ್ಕೆ ನಡೆದುಹೋದಾಗ ಇನ್ನೊಬ್ಬ ನ್ಯಾಯಾ ಧೀಶರು ಹೈಕೋರ್ಟಿನ ಅವಕೃಪೆಗೆ ಗುರಿಯಾಗಿ ಯಾವದೊ ಒಂದು ಮೂಲೆಗೆ ವರ್ಗಾಯಿಸಲ್ಪಟ್ಟರು. ನ್ಯಾಯಾಧೀಶ ಲೋಕೂರವರು

ಕೊಡುವ ನಿರ್ಣಯವು ಅಲುಗಾಡದಂತೆ, ಆಧಾರಪೂರ್ವಕವಾಗಿ ಭದ್ರವಾಗಿರುತ್ತದೆ. ಅಂತೇ ಜನತಾ ಪಕ್ಷವಿರಲಿ, ರಾಜಕೀಯ ಪಕ್ಷವಿರಲಿ, ಸರಕಾರದ ಪಕ್ಷವಿರಲಿ ಸತ್ಯವೇಕ ದೃಷ್ಟಿಯಿಂದ ನೋಡುವವರ ಕಣ್ಣಮುಂದೆ ಸರಕಾರದ ಅವಕೃಪೆಯ ಅಂಜಿಕೆ ಎಷ್ಟೂ ನಿಲ್ಲಲಾರದು. ನ್ಯಾಯಾಧೀಶ ಲೋಕೂರ ಅವರು ಕೊಟ್ಟ ಮೇಲಿನ ನಿರ್ಣಯವು ಸಾಂಗೋಪಾಂಗ ವಿಚಾರಪೂರ್ಣವಾಗಿದ್ದು ಎಲ್ಲಿಯೂ ಉಗುರಿನಷ್ಟು ಛಿದ್ರ, ಶೈಥಿಲ್ಯ ಸಿಗುವಂತಿರಲಿಲ್ಲ. ಅಂತೆಯೇ ದೇಶದ ಚಳುವಳಿಗೆ ಈ ನಿರ್ಣಯವು ಅನುಕೂಲವಾಗಬಹುದಿತ್ತೆಂದೆನಿಸಿದರೂ ಹೈಕೋರ್ಟಿಗೆ ಈ ನಿರ್ಣಯವನ್ನು ಯಾವ ರೀತಿಯಿಂದಲೂ ಬುಡ ಮೇಲುಮಾಡಲು ಸಾಧ್ಯವಾಗದೆ ಜಿಲ್ಹಾ ನ್ಯಾಯಾಧೀಶರ ನಿರ್ಣಯವನ್ನು ಮಾನ್ಯಮಾಡಬೇಕಾಯಿತು. ಇಲ್ಲದಿದ್ದರೆ ಸರಕಾರದ ನಿಷ್ಪಕ್ಷಪಾತ ನ್ಯಾಯನಿರ್ಣಯದ ತತ್ವಕ್ಕೇ ಕೊಡಲಿ ಪೆಟ್ಟು ಬೀಳುವಂತಹ ಪ್ರಸಂಗ.

ಪುಣೆಯ ಸೋನ್ಯಾಮಾರುತಿಯ ಪ್ರಕರಣದಲ್ಲಿ ಲೋಕೂರ ನ್ಯಾಯಾಧೀಶರು ಕೊಟ್ಟ ನಿರ್ಣಯ ಇತಿಹಾಸವಾಗಿದೆ. ಸೋನ್ಯಾಮಾರುತಿ ಗುಡಿಯಲ್ಲಿ ಗಂಟೆ ಬಾರಿಸಿ ಶಾಂತಿಭಂಗ ಮಾಡಿದ ಆರೋಪಿಗಳಿಗೆ ತಲೆತಲೆಗೆ ೨೫ ರೂ. ದಂಡ ಹೇರಿದ್ದರು. ನ್ಯಾಯಾಧೀಶ ಲೋಕೂರ ಅವರು ನ್ಯಾಯಮೇಕ ದೃಷ್ಟಿಯುಳ್ಳವರು. ಹಿಂದೂ ಜನರು ಭಯಭಕ್ತಿಯಿಂದ ದೇವರ ವಂದನೆಮಾಡಿದರೆ ಮುಸಲ್ಮಾನರಿಗೆ ಅದು ಶಾಂತತಾ ಭಂಗವೆಂಬುದನ್ನು ಸರಕಾರವು ಒಪ್ಪಿಕೊಂಡಿತ್ತು. ಇಂತಹ ಶಾಂತಿರಕ್ಷಕರನ್ನು ಶಿಕ್ಷಿಸಬೇಕೆಂದು ಹುಕುಂ ಮಾಡಿತ್ತು. ಸರಿ, ಸೋನ್ಯಾಮಾರುತಿಯ ಪ್ರಕರಣ ಮಹಾ ಪ್ರಕರಣವಾಗಿ ಹೋಯಿತು. ಈ ಪ್ರಕರಣದಲ್ಲಿ ನ್ಯಾಯಾಧೀಶ ಲೋಕೂರ ಅವರು ಮೇಲಿನ ನ್ಯಾಯಕಚೇರಿಗೆ ತಮ್ಮ ಹೇಳಿಕೆ ತಿಳಿಸಿದರು. ಕುರುಡರಾಗಿರದಿದ್ದರೂ ಮುಪ್ಪಿನಿಂದ ಮುಸುಳಿಸಿದ ಸರಕಾರದ ಕಣ್ಣಪರಿಯನ್ನು ಬಿಚ್ಚಿದರು. ಶಾಂತತಾ ಭಂಗವೆಂಬ ನಿಮಿತ್ತದಿಂದ ಹಿಂದೂ ಧರ್ಮದ ಪ್ರಕಾರ ದೇವದರ್ಶನ ಪದ್ಧತಿಗೆ ಕಲ್ಲುಹಾಕುವ ಅಧಿಕಾರ ಮ್ಯಾಜಿಸ್ಟ್ರೇಟರಿಗೆ ಇದೆಯೇ? ಎಂದು ಪ್ರಶ್ನೆಮಾಡಿದರು. ಕೇವಲ

ಒಂದೇ ಸೊತ್ತು ದೇವರ ಗುಡಿಯ ಗಂಟೆಯಂತಹ ಮಂಜುಳರವದ ವಾದ್ಯವನ್ನು ನುಡಿಸಿದರೆ ಕಾಯಿದೆಭಂಗವಾಯಿತೆ? ಶಾಂತತಾಭಂಗ ವಾಯಿತೆ? ಎಂದು ನ್ಯಾಯಾಧೀಶರು ಮೇಲಿನ ಕಚೇರಿಗೆ ಸವಾಲು ಹಾಕಿದಾಗ ಮೇಲಿನ ಆರೋಪಿಗಳಿಗೆ ವಿಧಿಸಲಾಗಿದ್ದ ಶಿಕ್ಷೆ ರದ್ದಾ ಯಿತು.

ಸೋನ್ಯಾಮಾರುತಿ ಸತ್ಯಾಗ್ರಹ ನಿಂತು ಹುಕುಮಿನ ಕಾಲ ಮರ್ಯಾದೆಯೂ ದಾಟಿಹೋಗಿತ್ತು. ಆಗ ಇನ್ನೊಂದು ಪ್ರಕರಣ ನಡೆಯಿತು. ವಿಶ್ವಾಸರಾವ ಎಂಬವರು ಸೋನ್ಯಾಮಾರುತಿಯ ಅಭಿಷೇಕ, ಸಂಗೀತ, ಸತ್ಯನಾರಾಯಣ ಮಹಾಪೂಜೆ ಮೊದಲಾದವುಗ ಳನ್ನು ನೆರವೇರಿಸುವ ತಮ್ಮ ಸಂಕಲ್ಪವನ್ನು ಪ್ರಕಟವಾಗಿ ಹೇಳಿದರು. ಬೀದಿಯಲ್ಲಿ ಸ್ವಲ್ಪ ಜನರ ಗುಂಪು ನೆರೆಯಬಹುದೆಂದು ಮ್ಯಾಜಿಸ್ಟ್ರೇಟರ ಅಪ್ಪಣೆಗಾಗಿ ಅರ್ಜಿಮಾಡಿದರು. ಮ್ಯಾಜಿಸ್ಟ್ರೇಟರು ಅಪ್ಪಣೆಕೊಡಲಿಲ್ಲ. ಒಂದು ವೇಳೆ ಅಪ್ಪಣೆವಿಾರಿ ಮಾಡಿದ್ದಾದರೆ, ಶಾಂತತಾ ಭಂಗದ ಭೀತಿಯ ಎಚ್ಚರಿಕೆಗಾಗಿ ವಿಶ್ವಾಸರಾಯರ ಕಡೆಯಿಂದ ಒಳ್ಳೇ ನಡತೆಯ ಬಗ್ಗೆ ಜಾಮಿಾನ ಬೇಡಿದರು. ಈ ವಿಷಯದಲ್ಲಿ ನ್ಯಾಯಾಧೀಶ ಲೋಕೂ ರರು ಮತ್ತೆ ತಮ್ಮ ನಿರ್ಣಯಕೊಟ್ಟರು. ಈ ನಿರ್ಣಯವಂತೂ ನ್ಯಾಯಾಧೀಶರ ವಿದ್ವತ್ತೆ, ಪರಿಶೀಲನದೃಷ್ಟಿ, ನಿಷ್ಪಕ್ಷಪಾತ ವಿಚಾರಣೆ, ಸ್ವತಂತ್ರಬುದ್ಧಿ ಇವುಗಳ ಪ್ರತೀಕವಾಗಿ ಉಳಿದಿದೆ. 'ತುಂಟತನಮಾಡಿ ಶಾಂತತೆಯನ್ನು ಭಂಗಪಡಿಸುವ ವ್ಯಕ್ತಿ, ಸಂಸ್ಥೆ ಮತ್ತು ಜಾತಿ ಇವು ಮೂರನೆಯವೇ ಇರುತ್ತವೆ. ತುಂಟತನಮಾಡಿ ದಂಗೆಯೆಬ್ಬಿಸಿ ಶಾಂತತೆಯನ್ನು ಕೆಡಿಸುವುದೆ ಇವರ ಉದ್ದೇಶ. ಈ ನಿಮಿತ್ತವಾಗಿ ತಮ್ಮ ನ್ಯಾಯಬದ್ಧವಾದ ಹಕ್ಕುಗಳನ್ನು ಉಪಭೋಗಿಸಲಿಚ್ಛಿಸುವ ಮನುಷ್ಯರ ವಿರುದ್ಧ ಹುಕುಂ ಹೊರಡಿಸಿ, ಶಾಂತಿಪ್ರಿಯರನ್ನು ಬಂಧಿಸಿ, ಅವರಿಗೆ ನ್ಯಾಯವಾದ ಹಕ್ಕುಗಳನ್ನು ಭೋಗಿಸುವ ಅವಕಾಶ ಕೊಡದಿರುವುದು ಶಾಂತತೆ, ಸುವ್ಯವಸ್ಥೆಗಳನ್ನು ಕಾಪಾಡುವ ಹಾದಿ ಯಲ್ಲ. ಇದರಿಂದ ಹೆಚ್ಚಿನ ಗಲಭೆಗೇ ಅವಕಾಶ ಮಾಡಿಕೊಟ್ಟಂತಾಗು ವದು'– ಎಂದು ನ್ಯಾಯಾಧೀಶ ಲೋಕೂರರು ನಿರ್ಣಯಕೊಟ್ಟದ್ದು

ಒಳ್ಳೇ ಬಿಗುಹಿನದೂ ಸಾಧಾರಪೂರ್ವಕವೂ ಆಗಿದ್ದು ಇಂಗ್ಲೀಷ ಮತ್ತು ಇತರ ಪಾಶ್ಚಿಮಾತ್ಯ ನಿರ್ಣಯಗಳ ಆಧಾರದ ಮೇಲಿದೆಯೆಂದು ಹೇಳುತ್ತಾರೆ.

ಅಗಳು ಹಿಸುಕಿ ಅನ್ನದ ಪರೀಕ್ಷೆಯೆಂಬ ರೀತಿ ನ್ಯಾಯಮೂರ್ತಿಗಳದು. ೧೯೩೭ ಡಿಶಂಬರದ ಸುಮಾರಿಗೆ ಪುಣೆಯ ಕೋರ್ಟಿಗೆ ಎರಡು ಅಪೀಲು ಬಂದಿದ್ದವು. ಬಹಳ ಗೊಂದಲಗೆಡಿಸುವಂತಹ ಪ್ರಕರಣ. ಸಾಧಾರಣ ಮೂರುನೂರು ವರುಷಗಳಿಂದ ಉದ್ಭವವಾಗಿರುವ ವಂಶಾವಳಿ ಹಾಗು ವಾರಸಾಪ್ರಶ್ನೆ. ವತನಕಾಯಿದೆ, ಪೆನ್ಶನ್‌ಕಾಯಿದೆ, ರೆವೆನ್ಯೂ ಜ್ಯೂರಿಸ್‌ಡಿಕ್ಶನ್ ಕಾಯಿದೆ, ಲ್ಯಾಂಡ ರೆವೆನ್ಯೂಕೋಡ, ಹಿಂದೂ ಲಾ, ಲಿಮಿಟೇಶನ್ ಆ್ಯಕ್ಟ, ಸಿ. ಪ್ರೊ. ಕೋಡ, ಲ್ಯಾಂಡ ರೆವೆನ್ಯೂ ರೂಲ್ಸ, ಎಲಿಯನೇಶನ್ ಮ್ಯಾನುಅಲ್ ಮೊದಲಾದ ಅನೇಕ ಕಾಯಿದೆಗಳಲ್ಲಿನ ಪ್ರಮುಖ ಪ್ರಶ್ನೆಗಳು ತಲೆಯೆತ್ತಿದ್ದವು. ಕೆಳಕೋರ್ಟು ಇಷ್ಟೆಲ್ಲಾ ಗೊಂದಲಕ್ಕೆ ಕೈಹಾಕಿ ತಲೆಕೆಡಿಸಿಕೊಳ್ಳದೆ ಬಹಳ ವೃದ್ಧನೆನಿಸಿದ ವಕೀಲ ಯಾವ ಪಕ್ಷ ವಹಿಸಿದ್ದನೊ ಅವನ ಹೇಳಿಕೆ, ಪ್ರಮಾಣಗಳ ಸಂಖ್ಯೆ ಸ್ಪಷ್ಟೀಕರಣ ಶೈಲಿಗಳನ್ನು ನೋಡಿ ಆದರಂತೇ ತೀರ್ಪುಕೊಟ್ಟು ಬಿಟ್ಟಿತು. ಅಪೀಲಿನಲ್ಲಿ ಉಭಯಪಕ್ಷಕ್ಕೂ ಪುಣೆಯಲ್ಲಿಯ ಪ್ರಮುಖ ವಕೀಲರು ಕೈವಾರಿಗಳಾಗಿ ನಿಂತಿದ್ದರು. ಉಭಯಪಕ್ಷದ ನಾಯಕರು ಟೇಬಲ್ಲಿನ ಮೇಲೆ ಕಾಯಿದೆ ಆಧಾರ ಗ್ರಂಥಗಳ ರಾಶಿರಾಶಿಯನ್ನೇ ಒಗೆದಿದ್ದರು. ಉಭಯಪಕ್ಷಗಳ ತಕರಾರುಗಳಿಗೆ ಕಿವಿಗೊಡಬೇಕಾದರೆ, ಸಂಪೂರ್ಣ ಎರಡು ದಿನಗಳಾದರೂ ಬೇಕೆಂದು ಎನಿಸಿತ್ತು. ಆದರೆ ನ್ಯಾಯಮೂರ್ತಿಗಳು ಮುದ್ದೆಯೊಳಗಿನ ೫–೧೦ ಪ್ರಶ್ನೆಗಳನ್ನು ಆರಿಸಿ ತೆಗೆದು ಅವನ್ನಷ್ಟೆ ಮಂಡಿಸಲು ಉಭಯಪಕ್ಷಕ್ಕೆ ಹೇಳಿದರು. ಎರಡು ಮೂರು ದಿನದ ಕೆಲಸ ಎರಡುಮೂರು ತಾಸುಗಳಲ್ಲಿ ಮುಗಿಯಿತು. ಮರುದಿನ ಎರಡೂ ಅಪೀಲುಗಳ ನಿರ್ಣಯಪತ್ರಗಳು ಕೈಗೆ ಬಂದವು. ಉಭಯ ಪಕ್ಷವಾದಿಗಳು ನಿರೂಪಿಸಿದ ಸಕಲಸಂಗತಿಗಳು ಅವರಲ್ಲಿ ಅಡಕವಾಗಿದ್ದವು. ಇಷ್ಟೇ ಅಲ್ಲ, ಉಭಯಪಕ್ಷಗಳು ಸ್ಪಷ್ಟವಾಗಿ ತಿಳಿದುಕೊಳ್ಳಲು ಅಸಮರ್ಥವಾಗಿದ್ದ ಅನೇಕ ವಿವರಣೆಗಳು ಅಲ್ಲಿದ್ದವು. ಇದು

ನ್ಯಾಯಮೂರ್ತಿ ಲೋಕೂರರ ತೀಕ್ಷ್ಣಬುದ್ಧಿಯು ಪುರಾವೆ, ಸಾಕ್ಷಿ.

ನ್ಯಾಯಮೂರ್ತಿ ಲೋಕೂರ ಅವರ ನ್ಯಾಯತೀರ್ಪು ನಿಜವಾದ ನಿಷ್ಪಕ್ಷಪಾತವಾದ ನ್ಯಾಯತೀರ್ಪು ಎಂಬುದು ಲೋಕ ಪ್ರತೀತಿ. ಯಾರಿಗಾದರೂ ಅನ್ಯಾಯವಾಯಿತು ಎಂಬ ಕಿವಿಮಾತಿನ ಕೂಗು ಕೂಡ ಎಲ್ಲಿಯೂ ಇಲ್ಲ.

"ನ್ಯಾಯಮೂರ್ತಿಗೆ ನನ್ನ ತನ್ನವರೆಂಬ ಭಾವನೆ ಸೋಂಕುವ ದಿಲ್ಲವೇ?" ನಾನು ಕೇಳಿದೆ.

"ನನ್ನ ಕಡೆಗೆ ಖಟ್ಲೆಯ ಕಾಗದ ಬಂದಾಗ, ವಾದಿ-ಪ್ರತಿವಾದಿಗಳ ಹೆಸರನ್ನು ಎಂದಿಗೂ ಮೊದಲು ನೋಡ ಹೋಗುವುದಿಲ್ಲ. ಇಡಿಯ ಪ್ರಕರಣವನ್ನು ಮೊದಲು ಅಭ್ಯಾಸಮಾಡುತ್ತೇನೆ"–ಎಂದು ನುಡಿದರು ನ್ಯಾಯಮೂರ್ತಿಗಳು.

ನ್ಯಾಯಮೂರ್ತಿಯೂ ಒಬ್ಬ ಮಾನವ ಪ್ರಾಣಿಯೆಂದು ಬಗೆದು ಬುದ್ಧಿವಂತ ವಕೀಲರು ಮಾನವ ಸಹಜವಾದ ನಿರ್ಬಲತೆಯನ್ನು ನ್ಯಾಯಮೂರ್ತಿಯಲ್ಲಿ ನಿರುಕಿಸಲು ಯತ್ನಿಸುವರು. ಅಂತಹ ಒಂದು ಛಿದ್ರವು ಸಿಕ್ಕಿತೊ, ಅದರ ಮೇಲೆ ತಮ್ಮ ಗೋಪುರವನ್ನು ಕಟ್ಟಲು ಹವಣಿಸುವರು. ವಕೀಲರ ಕುಯುಕ್ತಿ ಪ್ರಯುಕ್ತಿಗಳಿಗೆ ಹೆದೆಹಾಕು ವಷ್ಟು ನಿಷ್ಠುರ, ಕರ್ತೃತ್ವಶಾಲಿಯಾಗಿರಬೇಕಾಗುತ್ತದೆ ನ್ಯಾಯಾ ಧೀಶನು.

ಒಮ್ಮೆ ಒಂದು ಹೆಣ್ಣಿನ ಮೇಲಿನ ಬಲಾತ್ಕಾರದ ಪ್ರಕರಣ ನಡೆ ದಿತ್ತು. ಆಕೆ ಯಾವಾಗಲೂ ಅಡ್ಡಹಾದಿಯವಳು ಎಂಬುದನ್ನು ನರೆದ ಲೆಯ ಬುದ್ಧಿವಂತ ವಕೀಲರು ಸಿದ್ಧಮಾಡಲು ಹಾತೊರೆಯುತ್ತಿದ್ದರು. 'ನೀನು ಮುಂಬಯಿಗೆ ಬಂದು ಎಷ್ಟು ದಿವಸವಾಯಿತು? ಯಾವ ಓಣಿ ಯಲ್ಲಿ ಇರುತ್ತಿದ್ದಿ? ನಿನ್ನ ವೇಷಭೂಷಣವೆಂತಹವಿರುತ್ತಿದ್ದವು?', ಎಂದು ಕೇಳುತ್ತ ಕೇಳುತ್ತ 'ನೀನು ಮೈನೆರೆದು ಎಷ್ಟು ದಿನಗಳಾದವು?' ಎಂದು ಕೇಳಿದರು. ನ್ಯಾಯಮೂರ್ತಿಗಳು ಅನಗತ್ಯವಾದ ಪ್ರಶ್ನೆ ಗಳಿಗೆ ಬಾರಕೋಲಿನ ಏಟಿನಂತೆ ತಾವೇ ಉತ್ತರಕೊಟ್ಟು, ವಕೀಲ ರನ್ನು ಸರಳಹಾದಿಗೆ ಹಚ್ಚುತ್ತಿದ್ದರು. 'ಮಿ ಲಾರ್ಡ, ಆಕೆ ಹಿಂದಕ್ಕೆ

ಮುಂಬಯಿಗೆ ಬಂದ ದಿನಾಂಕ, ತಿಂಗಳು, ವರುಷದ ಮೇರೆಗೆ ದೀಪಾವಳಿ ಆಗುವುದಿಲ್ಲ. ಆಕೆ ದೀಪಾವಳಿಗೆ ಬಂದಿದ್ದೆ ಎಂದು ಹೇಳುತ್ತಾಳೆ ಎಂದರು ವಕೀಲರು. ನ್ಯಾಯಮೂರ್ತಿಗಳು ಒಂದೇ ಮಾತಿನಲ್ಲಿ ಅದನ್ನು ಸರಿಯಾಗಿ ತಿದ್ದಿಬಿಟ್ಟರು. ವಕೀಲರು ಮೂಕರಾದರು.

ನಿಪುಣ ಬ್ಯಾಟ್ಸಮನ್‌ನನ್ನು ಔಟ್ ತೆಗೆದುಕೊಳ್ಳಲಿಕ್ಕೆ ಬೋಲರನು ಎಲ್ಲಿಯಾದರೂ ಒಂದು ಗೋಪುವನ್ನು ಹುಡುಕಲು ಯತ್ನಿಸುತ್ತಾನೆ. ಒಂದು ಸಣ್ಣ ಬಿಂದು ಸಿಕ್ಕರೆ ಸಾಕು. ಅಷ್ಟರ ಮೇಲೆ ಬ್ಯಾಟ್ಸಮನ್‌ನನ್ನು ಸೋಲಿಸಲೆತ್ನಿಸುತ್ತಾನೆ. ಚುರುಕು ವಕೀಲರು ನ್ಯಾಯಾಧೀಶನ ಗೋಪುವನ್ನು ನಿರುಕಿ ಹಿಡಿಯುವದಕ್ಕೆ ಹವಣಿಸುತ್ತಾರೆ. ನ್ಯಾಯಮೂರ್ತಿ ಲೋಕೂರ ಅವರಲ್ಲಿ ಯಾವ ಗೋಪುದ ಲವಲೇಶವಿಲ್ಲವೆಂದೇ ಪಾವಟಿಗೆಯ ಮೆಟ್ಟಲನ್ನೇರಿದಂತೆ ಅಸಿಸ್ಟಂಟ ಜಜ್ಜ್, ಸರಕಾರಿ ವಕೀಲ ಈ ದರ್ಜೆಯಿಂದ ಮುಂಬಯಿ ಹೈಕೋರ್ಟಿನ ನ್ಯಾಯಮೂರ್ತಿಯ ಘಟ್ಟಕ್ಕೇರಿ ಪಟ್ಟಕ್ಕೆ ಕೂತರು.

ಶ್ರೀ. ಲೋಕೂರ ನಾರಾಯಣರಾಯರು ಹೈಕೋರ್ಟಿನ ನ್ಯಾಯಮೂರ್ತಿಗಳಾದುದು ಅಗಸ್ಟ ೧೯೪೭ರಲ್ಲಿ – ಅಖಿಲ ಭಾರತಕ್ಕೆ ಇತಿಹಾಸ ಪ್ರಸಿದ್ಧ ವರುಷವದು – ಅಗಸ್ಟ ೯ನೆಯ ತಾರೀಖು! ಈ ಮೊದಲೇ ೧೯೩೮–೩೯ರಲ್ಲಿ ಒಂದು ವರುಷ ಹೈಕೋರ್ಟಿನ ನ್ಯಾಯಮೂರ್ತಿಗಳಾಗಿದ್ದರು.

ನ್ಯಾಯಕ್ಷೇತ್ರದಲ್ಲಿ ನ್ಯಾಯಮೂರ್ತಿಗಳ ನ್ಯಾಯವೃತ್ತಿ ಪ್ರಾರಂಭವಾದುದು, ೧೯೧೮ರಿಂದಲೆ – ಸಾತಾರೆಯ ಅಸಿಸ್ಟಂಟ ಜಜ್ಜರಾಗಿ ನೇಮಕವಾದಾಗಿನಿಂದ ಎನ್ನಬಹುದು. ೧೯೨೧ಕ್ಕೆ ಮರಳಿ ಸರಕಾರಿ ವಕೀಲವೃತ್ತಿಗೆ ಬಂದವರು ಜೂನ ೧೯೨೫ರಲ್ಲಿ ನಾಸೀಕಕ್ಕೆ ಜಿಲ್ಹಾ ನ್ಯಾಯಾಧಿಕಾರಿಗಳಾಗಿ ನಿಯಮಿಸಲ್ಪಟ್ಟರು; ಮತ್ತು ಅದೇ ವರುಷ ಅಕ್ಟೋಬರದಲ್ಲಿ ಪೂರ್ವಖಾನದೇಶದ ಜಿಲ್ಹಾಕೋರ್ಟು ಹೊಸತಾಗಿ ಪ್ರಾರಂಭವಾಗಲು ಜಳಗಾಂವದ ಪ್ರಥಮ ಜಿಲ್ಹಾ ನ್ಯಾಯಾಧೀಶರಾಗಿ ವರ್ಗಾಯಿಸಲ್ಪಟ್ಟರು. ಆ ಮೇಲೆ ೧೯೩೮ರ ವರೆಗೆ ಅಹಮ್ಮದಾಬಾದ, ಧಾರವಾಡ, ಪುಣೆಗಳಿಗೆಲ್ಲಾ ಜಿಲ್ಹಾ ನ್ಯಾಯಾಧಿಕಾರಿಗಳಾಗಿ ವರ್ಗ

ಯಿಸಲ್ಪಟ್ಟ—೧೯೪೩ರಿಂದ ಮುಂಬಯಿ ಹೈಕೋರ್ಟಿನ ನ್ಯಾಯ ಮೂರ್ತಿಗಳಾಗಿ ಕಾರ್ಯನಿರ್ವಹಿಸಿ, ೧೯೪೭ನೆಯ ಮಾರ್ಚ ೨೦ಕ್ಕೆ ನ್ಯಾಯಖಾತೆಯಲ್ಲಿ ನಾಲ್ವತ್ತು ವರುಷದ ಸೇವೆಸಲ್ಲಿಸಿ, ಹೈಕೋರ್ಟಿನಿಂದ ನಿವೃತ್ತರಾದರು.

ನ್ಯಾಯಮೂರ್ತಿಗಳು ಎಪ್ರಿಲ್ ೨೧, ೧೯೪೭ಕ್ಕೇ ನಿವೃತ್ತರಾಗ ಬೇಕಾಗಿತ್ತು. ಒಂದು ತಿಂಗಳ ರಜೆ ತೆಗೆದುಕೊಂಡುದರಿಂದ ಮಾರ್ಚ ೨೦ಕ್ಕೇ ಬೀಳ್ಕೊಳ್ಳುವ ಪ್ರಸಂಗಬಂತು.

ನ್ಯಾಯಮೂರ್ತಿಗಳು ನಿವೃತ್ತರಾಗುವರೆಂಬ ಸುದ್ದಿ ಹಬ್ಬಿತು. ನ್ಯಾಯಮೂರ್ತಿಗಳಿಗೆ ಬೀಳ್ಕೊಡುವ ಸಮಾರಂಭಗಳ ಸುರಿಮಳೆ.

೬-೩-೪೭ನೆಯ ಪೂರ್ಣಿಮೆಯ ದಿನ. ಮುಂಬಯಿ ಹೈಕೋರ್ಟಿನಲ್ಲಿ ಅಖಿಲ ಮುಂಬಯಿ ಪ್ರಾಂತದ ನ್ಯಾಯಾಧೀಶ ಮಂಡಲಿಯ ಪತಿಯಿಂದ ಬೀಳ್ಕೊಳ್ಳುವ ಮಹಾಸಮಾರಂಭ ಜರುಗಿತು. ಅದರ ಮುನ್ನಾದಿನ ಮುಂಬಯಿಯಲ್ಲಿ ಪ್ರಾಂತದ ಮೂಲೆಮೂಲೆಗಳಿಂದ ನ್ಯಾಯಾಧೀಶರು ಬಂದು ಸಮ್ಮಿಲಿತರಾಗಿದ್ದರು. ನ್ಯಾಯಮೂರ್ತಿ ಲೋಕೂರ ಅವರ ಲೋಕಪ್ರಿಯತೆಗೆ ಅಖಿಲ ಮುಂಬಯಿ ಪ್ರಾಂತದ ನ್ಯಾಯ ಮಂಡಲಿಯಿಂದ ದೊರೆತ ಸನ್ಮಾನ ಒಂದು ಸಾಕ್ಷಿ; ದಿನದಿನವೂ ಮಿತ್ರ ಮಂಡಲಿಯಲ್ಲಿ, ವಿವಿಧ ಸಾರ್ವಜನಿಕ ಸಂಘ-ಸಂಸ್ಥೆಗಳಲ್ಲಿ ಸಂತೋಷ ಕೂಟಗಳು ತೆರಪಿಲ್ಲದೆ ನಡೆದುದು ಇನ್ನೊಂದು ಸಾಕ್ಷಿ.

ಮುಂಬಯಿ ಮುಖ್ಯ ನ್ಯಾಯಮೂರ್ತಿ ಸರ್ ಲಿಯೊನಾರ್ಡ ಸ್ಟೋನರು ನ್ಯಾಯಮೂರ್ತಿಗಳ ಜೀವಚಿತ್ರದ ಅನಾವರಣ ಮುಹೂರ್ತ ಮಾಡಿದರು. ನ್ಯಾಯಾಧೀಶರ ಸಮ್ಮೇಳನದಲ್ಲಿ ನ್ಯಾಯಮೂರ್ತಿಗಳ ಬಗ್ಗೆ ಮಾತನಾಡುತ್ತ ಸರ್ ಲಿಯೊನಾರ್ಡರು ಹೇಳಿದರು: 'ಇದೇ ನನ್ಯಾಯ. ಹೈಕೋರ್ಟಿನ ನ್ಯಾಯಮೂರ್ತಿಯ ಬುದ್ಧಿಶಕ್ತಿಯ ಪರಮಾವಧಿ ಕಾಲಕ್ಕೆ ಅವಶ್ಯ ನಿವೃತ್ತರಾಗಬೇಕೆಂದು ಕಾಯಿದೆ ಮಾಡಿರುವುದೊಂದು ಬುದ್ಧಿಗೇಡಿತನದ, ಹಾನಿಕಾರಕ ಪರಂಪರೆಯಾಗಿದೆ. ಇನ್ನೂ ಎಷ್ಟೊ ಕಾಲ ಲೋಕಕ್ಕೆ ಒಳ್ಳೇ ನ್ಯಾಯ ತೀರ್ಪು ಸಲ್ಲಬಹುದೆಂಬ ಭರವಸೆಯಿರುತ್ತಿರುವಾಗಲೆ ಅವರನ್ನು ನಿವೃತ್ತರಾಗ

ಹಚ್ಚುವುದೆಂದರೆ ಇದೊಂದು ಮೂಢ ರೂಢಿ.' ತಲೆಯ ಮೇಲೆ ಧರಿಸಿದ ಕಿರೀಟವನ್ನು ಇನ್ನೊಮ್ಮೆ ಧರಿಸದಂತೆ ಕಳಚಿ ಕೆಳಗಿಡುವಾಗ ಆಗಬೇಕಾದ ಉದ್ವೇಗದಿಂದ ಮುಖ್ಯನ್ಯಾಯಮೂರ್ತಿಗಳು ಮಾತನಾಡಿದರು.

'ಕ್ರಿಮಿನಲ್ ಲಾದಲ್ಲಿ ನ್ಯಾಯಮೂರ್ತಿ ಲೋಕೂರ ಅವರು ನನಗೆ ಗುರು ಸಮಾನರು. ಈ ಹೊತ್ತು ಜ್ಯೂರಿಸ್‌ಪ್ರುಡನ್ಸಿನ ಈ ಶಾಖೆಯಲ್ಲಿರುವ ನನ್ನ ಜ್ಞಾನವು ಲೋಕೂರರಿಂದ ಬಂದದ್ದು'– ಸರ್ ಲಿಯೊನಾರ್ಡರು ಉದ್ಗಾರವೆತ್ತಿದರು.

'ನ್ಯಾಯಮೂರ್ತಿ ಲೋಕೂರ ಅವರು ನ್ಯಾಯ ಖಾತೆಯಲ್ಲಿ ನಾಲ್ವತ್ತು ವರುಷದ ಸೇವೆ ಸಲ್ಲಿಸಿದ್ದಾರೆ. ನ್ಯಾಯ ಖಾತೆಯಲ್ಲಿ ಪ್ರವೇಶಿಸಿದ ಕೂಡಲೆ ಒಂದರ ಮೇಲೊಂದು ಮೆಟ್ಟಿಲನ್ನು ಏರುತ್ತ ಶಿಖರವನ್ನು ಮುಟ್ಟಿದರು. ಅವರು ಇಂತಹ ಉನ್ನತಿಯ ಮಟ್ಟಕ್ಕೇರಿದ್ದು ಅವರ ಪರಿಶ್ರಮದ ಫಲ. ಪ್ರತಿನಿತ್ಯ ಉಳಿದವರು ಕೋರ್ಟಿನ ಮೆಟ್ಟು ಹತ್ತುವುದರೊಳಗಾಗಿ ಲೋಕೂರ ಅವರು ತಮ್ಮ ಕಾಗದ ಪತ್ರಗಳಲ್ಲಿ ಮುಳುಗಿ ಹೋಗಿರುತ್ತಿದ್ದರು,'—ಎಂದು ಮುಕ್ತಕಂಠದಿಂದ ನ್ಯಾಯಮೂರ್ತಿಗಳಿಗೆ ಸಲ್ಲುವ ಕಾಣಿಕೆಯನ್ನು ಕೊಟ್ಟರು.

ನ್ಯಾಯಮೂರ್ತಿಗಳ ಕಾಯಿದೆ ಅಭ್ಯಾಸ, ಎಲ್‌ಎಲ್. ಬಿ. ಪರೀಕ್ಷೆಯಲ್ಲಿ ಅವರು ಪಡೆದ ಮೆಚ್ಚು ಕಾಣಿಕೆಗಳು, ಉಚ್ಚ ಶ್ರೇಣಿಯ ಶ್ರೇಯಸ್ಸು, ಆ ಮೇಲೆ ಕಾಯಿದೆ ಕ್ಷೇತ್ರದಲ್ಲಿ ವೃತ್ತಿಯನ್ನವಲಂಬಿಸಿ ನಿಂತು ಮಾಡಿದ ಕಾರ್ಯ, 'ಜ್ಯುಡಿಸಿಯರಿ ಮತ್ತು ಎಗ್ಜಿಕ್ಯೂಟಿವ್'— ಕಾರ್ಯಕ್ಷೇತ್ರಗಳನ್ನು ವಿಂಗಡಿಸುವ ಯೋಜನೆ ತಯಾರಿಸಲು ಸರಕಾರವು ನಿಯಮಿಸಿರುವ ಕಮಿಟಿಯ ಚೇರಮನ್‌ರಾಗಿ ಮಾಡಿದ ಅಮೋಘ ಕಾರ್ಯಕಲಾಪಗಳನ್ನು ಅಂದಿನ ಅಧ್ಯಕ್ಷರೂ ಉಳಿದ ಅತಿಥಿಗಳೂ ವಿವರ ವಿವರವಾಗಿ ವರ್ಣಿಸಿ ಹೇಳಿದರು.

ನ್ಯಾಯಮೂರ್ತಿಗಳಿಗೆ ಹೈಕೋರ್ಟಿನಲ್ಲಿ ಸನ್ಮಾನ ಸಮಾರಂಭವಾಗಿ ೩೧ನೆಯ ಮಾರ್ಚಿಗೆ ನಿವೃತ್ತರಾಗುವ ವರೆಗೆ ಮುಂಬಯಿಯ ಮುಖ್ಯ ಭಾಷೆಗಳ ಎಲ್ಲ ಪತ್ರಿಕೆಗಳಲ್ಲೂ ಅವರ ಸಚಿತ್ರ ಪರಿಚಯಗಳು

ಬಂದುವು. ಮಾರ್ಚ ೨೧ಕ್ಕೆ 'ಟಾಯಿಮ್ಸ ಆಫ್ ಇಂಡಿಯಾ' ಪತ್ರಿಕೆಯು ನಿವೃತ್ತ ನ್ಯಾಯಮೂರ್ತಿಗಳಿಗೆ ಒಪ್ಪುವ ಕಾಣಿಕೆಯನ್ನು ಸಲ್ಲಿಸಿದೆ.

೧೬-೩-೪೭ನೆಯ ಆದಿತ್ಯವಾರ. ಅಂದು ಮುಂಬಯಿ ಕರ್ನಾಟಕ ಸಂಘದ ಸದಸ್ಯರಿಂದ ಲೋಕೂರ ದಂಪತಿಗಳಿಗೆ ಅನೌಪಚಾರಿಕ ಸಂತೋಷ ಸಮಾರಂಭ. ಅನೇಕ ಸಹೃದಯರು ಭಾವಪೂರ್ಣವಾಗಿ ಮಾತನಾಡಿದರು.

ಪ್ರಾರಂಭದಲ್ಲಿ ಕರ್ನಾಟಕ ಸಂಘದ ಕಾರ್ಯದರ್ಶಿಗಳು ನ್ಯಾಯಮೂರ್ತಿಗಳು ಕರ್ನಾಟಕ ಸಂಘದ ಅಧ್ಯಕ್ಷರಾಗಿ ದೊರೆತ ಸುಯೋಗವನ್ನು ಕೊಂಡಾಡುತ್ತ ತಟಸ್ಥವಾಗಿದ್ದ ಕರ್ನಾಟಕ ಸಂಘವು ಆಗಿನಿಂದ ಸಚೇತನವಾಗಿ ತನ್ನ ಚಟುವಟಿಕೆಗಳನ್ನು ಸ್ಫೂರ್ತಿಯಿಂದ ನಡೆಸಿದೆಯೆಂದರು.

"ಕಾರ್ಯದರ್ಶಿಗಳು ತಾವು ಮಾಡಿದ ಕಾರ್ಯಕಲಾಪಗಳ, ಕೈಕೊಂಡ ಪರಿಶ್ರಮದ ಶ್ರೇಯಸ್ಸನ್ನು ಮಾತ್ರ ನನಗೆ ಕೊಡುತ್ತಿದ್ದಾರೆ. ನಿಜವಾಗಿ ನಾನೇನೂ ಕಾಯುಕಷ್ಟದಿಂದ ಕೆಲಸ ಮಾಡಿಲ್ಲ. ನನ್ನ ಹೆಸರನ್ನು ಮಾತ್ರ ಕೊಟ್ಟಿದ್ದೇನೆ"— ಎಂದು ಸಂಘದ ಅಧ್ಯಕ್ಷರು ಉತ್ತರಿಸಿದರು.

ನ್ಯಾಯಮೂರ್ತಿಗಳು ನಿವೃತ್ತರಾಗಿ ಮುಂಬಯಿಂದ ನಿಷ್ಕ್ರಮಣ ಮಾಡುತ್ತಿರುವ ಬಗ್ಗೆ ಎಲ್ಲರೂ ತಂತಮ್ಮ ಅಂತಃಕರಣಕ್ಕೆನಿಸಿದ ವಿಷಾದಭಾವವನ್ನು ವ್ಯಕ್ತಮಾಡಿದರು. ನ್ಯಾಯಮೂರ್ತಿಗಳು ನಿವೃತ್ತ ಜೀವನವನ್ನು ಕೊಲ್ಹಾಪುರದಲ್ಲಿ ಕಳೆಯಲು ನಿರ್ಧರಿಸಿದ್ದಾರೆ. ನ್ಯಾಯಕ್ಷೇತ್ರವನ್ನು ಅವರಿನ್ನೂ ಬಿಟ್ಟಿಲ್ಲ. ಕೊಲ್ಹಾಪುರ ಮತ್ತು ದಕ್ಷಿಣ ಸಂಸ್ಥಾನಗಳ ಮುಖ್ಯ ನ್ಯಾಯಮೂರ್ತಿಗಳಾಗಿ ಅವರು ಸನ್ಮಾನಿಸಲ್ಪಟ್ಟಿದ್ದಾರೆ. ನ್ಯಾಯಮೂರ್ತಿಗಳು ನೌಕರಿಯ ಮಟ್ಟಿಗಷ್ಟೆ ನ್ಯಾಯಮೂರ್ತಿಗಳಾಗಿದ್ದಿಲ್ಲ. ಜೀವನದುದ್ದಕ್ಕೆ ಕಚೇರಿಯ ಒಳ ಹೊರಗೆ, ಮನೆಯಲ್ಲಿ, ಮನೆಯಾಚೆ, ಶ್ರೀ ಲೋಕೂರರು ನ್ಯಾಯಮೂರ್ತಿಗಳು. ಇನ್ನೊಬ್ಬರಿಗೆ ಅನ್ಯಾಯ ಅಹಿತಗಳನ್ನು ಬಗೆಯಲು

ಕನಸು ಮನಸಿನಲ್ಲಿ ಕೂಡ ಅರಿಯದ ಅವರ ಸರಳ ಜೀವನವೆ, ನಿವೃತ್ತರಾಗಿಯೂ ಅವರನ್ನು ಮತ್ತೆ ನ್ಯಾಯಮೂರ್ತಿಗಳನ್ನು ಮಾಡಿ ಲೌಕಿಕ ಕೀರ್ತಿಯನ್ನು ಬೆಳಗಿಸಿದೆ.

"ಸೂರ್ಯನು ಈ ಗೋಲಾರ್ಧದಲ್ಲಿ ಮುಳುಗಿದರೂ ಇನ್ನೊಂದು ಗೋಲಾರ್ಧದಲ್ಲಿ ಉದಿಸುವನು. ನ್ಯಾಯಮೂರ್ತಿ ಲೋಕೂರ ಅವರು ಇಂದು ಮುಂಬಯಿ ಕನ್ನಡಿಗರಿಂದ ದೂರ ಹೋದರೂ ಕೊಲ್ಹಾಪುರದಂತಹ ಹಳೆಯ ಕನ್ನಡ ಗಂಡುಮೆಟ್ಟಿನ ಕೀರ್ತಿ ಕಹಳೆಯನ್ನು ಮೊಳಗಿಸಿ, ಅಲ್ಲಿಯ ಕನ್ನಡದ ಸುಪ್ತ ಚೇತನವನ್ನು ಜಾಗ್ರತಗೊಳಿಸಲು ಅಲ್ಲಿ ಪ್ರವೇಶಿಸಲಿದ್ದಾರೆಂದು ನಾವೆಲ್ಲ ಹಿಗ್ಗೋಣ. ಅಖಿಲ ಭಾರತಕ್ಕೊಬ್ಬ ಗಾಂಧೀಜಿ ಇದ್ದರೂ ವಾಯುವ್ಯಕ್ಕೊಬ್ಬ ಗಾಂಧೀಜಿ ಬೇಕಾದ ಹಾಗೆ ಕೊಲ್ಹಾಪುರಕ್ಕೆ ಇಂದೇ ಕನ್ನಡ ವಾಯುವ್ಯಗಾಂಧಿಯಾಗಿ ಲೋಕೂರರು ತೆರಳಲಿದ್ದಾರೆ. ಕೊಲ್ಹಾಪುರದ ಮುಖ್ಯ ನ್ಯಾಯಮೂರ್ತಿಗಳಾಗಿ ಶ್ರೀ. ಲೋಕೂರ ಅವರು ಇಂದು ತೆರಳಲಿದ್ದಾರೆಂದು ನಮಗೆ ಹಿಗ್ಗಾದರೂ ನಾಳೆ ಸ್ವತಂತ್ರ ಕನ್ನಡ ಪ್ರಾಂತಕ್ಕೆ ಮುಖ್ಯ ನ್ಯಾಯಮೂರ್ತಿಗಳಾಗಿಯೊ ಕನ್ನಡ ವಿಶ್ವವಿದ್ಯಾನಿಲಯದ ವ್ಹಾಯಿಸ ಚಾನ್ಸಲರರಾಗಿಯೊ ಲೋಕೂರ ಅವರು ಮರಳಿ ಬರುವರೆಂಬ ಸುದಿನವನ್ನು ನಾನು ನಿರೀಕ್ಷಿಸುತ್ತಲಿದ್ದೇನೆ"—ಎಂದು ಅಂದಿನ ಸದಸ್ಯರೊಬ್ಬರು ಆವೇಶದಿಂದ ಮಾತನಾಡಿದರು.

ಶ್ರೀ. ಲೋಕೂರ ಅವರು ಇಷ್ಟೊತ್ತು ಉತ್ತರ ಹಿಂದುಸ್ಥಾನದಲ್ಲೇ ಬಹುಕಾಲ ಕಳೆದು ಬಂದರೂ ಅಚ್ಚಗನ್ನಡತನವನ್ನು ಉಳಿಸಿಕೊಂಡು ಬಂದಿದ್ದಾರೆ. ಇದರ ಬಹುಭಾಗದ ಶ್ರೇಯಸ್ಸು ಶ್ರೀಮತಿ ಲಕ್ಷ್ಮೀಬಾಯಿ ಲೋಕೂರ ಅವರದು. ಕನ್ನಡದ ಯಾವುದೇ ಚಟುವಟಿಕೆಗೆ, ಅದು ಎಷ್ಟೇ ಅಲ್ಪ ಮಹತ್ವದ್ದಿರಲಿ ಒಮ್ಮೆಯೂ ಅವರಿಂದ ನಕಾರ ಬಂದಿಲ್ಲ—ಎಂದು ಮತ್ತೊಬ್ಬರು ಅಭಿಮಾನಪಟ್ಟುಕೊಂಡು ಹೇಳಿದರು.

ಅಂದಿನ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಶ್ರೀ. ಆರ್. ಎ. ಜಾಗೀರದಾರರು ಶ್ರೀ. ಲೋಕೂರ ಅವರ ಕನ್ನಡಾಭಿಮಾನವನ್ನೂ, ಕೆಚ್ಚು ಕನ್ನಡತನವನ್ನೂ ತಾವೇ ಸಾಕ್ಷಿಯಾಗಿ ಕಂಡ ಒಂದು ಸಂದರ್ಭ

ವನ್ನು ವಿವರಿಸಿದರು– ಒಂದು ಮಹಾರಾಷ್ಟ್ರ ಸಂಘದ ಸಮಾರಂಭದಲ್ಲಿ ಶ್ರೀ. ಲೋಕೂರ ಅವರು ಅವರ ಗೌರವದ ಕಾಣಿಕೆಯನ್ನು ಸ್ವೀಕರಿಸಿ ಮಾರು ಹೋಗದೆ–'ನಾನು ಮಹಾರಾಷ್ಟ್ರದವನಲ್ಲ. ನಾನು ಕನ್ನಡಿಗ. ನನ್ನ ಹುಟ್ಟೂರು ಲೋಕೂರು. ಅದು ಬೆಳಗಾಂವಿ ಜಿಲ್ಹೆಯಲ್ಲಿದೆ. ನನ್ನ ತಾಯಿ ಕರ್ನಾಟಕದವರು. ನನ್ನ ತಂದೆ ಕರ್ನಾಟಕದವರು ನಾನು ಕರ್ನಾಟಕದವ' – ಎಂದು ಎದೆ ತಟ್ಟಿಕೊಂಡು ಹೇಳಿದರು– ಎಂದು ಸ್ಪಷ್ಟೀಕರಣ ಮಾಡಿದರು.

"ನಾನು ಹೈಕೋರ್ಟ ನ್ಯಾಯಾಧೀಶನಾದುದು ನನ್ನ ಕುಂಡಲಿಯ ಬಲದಿಂದ, ಆದರೆ ನಾನು ಕನ್ನಡಿಗನಾಗಿ ಉಳಿದು ಬೆಳೆದುದು ಕುಂಡಲಿಯ ಬಲದಿಂದಲ್ಲ; ನನ್ನ ಕನ್ನಡ ಛಲದಿಂದ, ಕನ್ನಡ ಅಭಿಮಾನದಿಂದ"– ಅಂದಿನ ಮುಕ್ತಾಯದ ಭಾಷಣದಲ್ಲಿ ನ್ಯಾಯಮೂರ್ತಿಗಳು ಮಾತನಾಡಿದರು.

"ನಾನು ಕನ್ನಡ ಸಾಹಿತ್ಯ ಓದಿಕೊಂಡಿಲ್ಲ; ಕನ್ನಡ ಪ್ರಾಥಮಿಕ ಶಿಕ್ಷಣಕ್ಕೇ ನನ್ನ ಕನ್ನಡ ಅಭ್ಯಾಸ ನಿಂತುಹೋಯಿತು. ಮುಂಬಯಿಯಲ್ಲಿ ಕರ್ನಾಟಕ ಸಂಘದ ಪುಸ್ತಕಾಲಯದ ಉಪಯೋಗ ಮಾಡಿಕೊಳ್ಳಲು ನನಗೆ ಹೆಚ್ಚಿನ ಅವಕಾಶ ದೊರೆಯಲಿಲ್ಲವೆಂದು ದುಃಖಪಡುತ್ತೇನೆ. ಶ್ರೀ. ಕುಲಕರ್ಣಿಯವರು ನನ್ನ ಪರಿಚಯ ಬರೆದಿದ್ದಾರೆ. ಅವರು ಕವಿಗಳು. ಅವರು ಬರೆದ ಕನ್ನಡ ನಾನು ಅರ್ಥಮಾಡಿಕೊಂಡು ಓದಬೇಕು. ನಾನು ಕನ್ನಡ ಅಭ್ಯಾಸ ಮಾಡುವುದಕ್ಕೆ ಇದನ್ನೇ ಪ್ರಥಮ ಗ್ರಂಥವಾಗಿ ತೆಗೆದುಕೊಳ್ಳುವೆ" ಎಂದು ನ್ಯಾಯಮೂರ್ತಿಗಳು ವಿನಯಪೂರ್ವಕವಾಗಿ ತಮ್ಮ ಕನ್ನಡ ಪ್ರೀತಿಯನ್ನು ವ್ಯಕ್ತಗೊಳಿಸಿದರು.

ನ್ಯಾಯಮೂರ್ತಿಗಳು ಕನ್ನಡಿಗರಾಗಿ ಉಳಿದು ನ್ಯಾಯಮೂರ್ತಿಗಳಾಗಿ ಬೆಳೆದುದಕ್ಕೆ ಶ್ರೀಮತಿ ಲೋಕೂರರು ಅರ್ಧಪಾಲು ಕಾರಣ ಎಂಬುದಕ್ಕೆ ಶ್ರೀಮತಿ ಲೋಕೂರರು ಉತ್ತರ ಕೊಟ್ಟರು

"ನೀವೆಲ್ಲಾ ನನಗೆ ಬಹಳ ದೊಡ್ಡ ಗೌರವ ಕೊಟ್ಟಿದ್ದೀರಿ; ಆದರ ತೋರಿದ್ದೀರಿ. ನ್ಯಾಯಮೂರ್ತಿಗಳ ಉತ್ತರೋತ್ತರಾಭಿವೃದ್ಧಿಗೆ ನಾನು ಕಾರಣ ಎಂದಿದ್ದೀರಿ. ನ್ಯಾಯಮೂರ್ತಿಗಳು ನನ್ನ ಕೈ ಹಿಡಿದಿಲ್ಲ;

ನ್ಯಾಯಮೂರ್ತಿಗಳ ಕೈ ನಾನು ಹಿಡಿದಿದ್ದೇನೆ. ಅವರಿಂದಲೇ ನನಗೆ ಬೆಳಕು; ಸೌಭಾಗ್ಯ. ನ್ಯಾಯಮೂರ್ತಿಗಳ ಅಲ್ಪ ಸಂಪರ್ಕದಿಂದ ತಿಳಿಯಾದೆವೆಂದು ಕೆಲವರು ಹೇಳಿದರು. ನಾನು ಯಾವಾಗಲೂ ಅವರ ಸಹಚರಿಣಿ, ಅವರ ಸಂಪರ್ಕದಿಂದ ನಾನು ತಿಳಿಯಾಗಿದ್ದೇನೆ. ಬೆಳಕು ಕಂಡಿದ್ದೇನೆ. ನನ್ನಿಂದ ಅವರು ಏರಿದರು ಎನ್ನುವುದು ನಿಮ್ಮ ಗೌರವದ ನುಡಿಯ ಹೊರತಾಗಿ ಇನ್ನೊಂದಲ್ಲ.''

ಶ್ರೀಮತಿ ಲೋಕೂರ ಅವರು ಮಾತನಾಡಲು ಎದ್ದು ನಿಂತಾಗ ಅವರ ಹೃದಯ ತುಂಬಿ ಬಂದಿತ್ತು; ಕಂಠ ಗದ್ಗದಿತವಾಗಿತ್ತು; ಭಾವನೆಯ ಸೆಳವಿನಲ್ಲಿ ಮಾತು ಮುಳುಗಿ ಹೋಗುತ್ತಿದ್ದವು.

"ನಾನು ನ್ಯಾಯಮೂರ್ತಿಯಾದುದಕ್ಕೆ ನನ್ನ ಕುಂಡಲಿಯೊಂದೇ ಕಾರಣವಲ್ಲದಿದ್ದರೆ ನನ್ನ ಧರ್ಮ ಪತ್ನಿಯ ಕುಂಡಲಿಯೂ ಕಾರಣವಾಗಿರಬಹುದು ಎಂದು ನಾನು ಒಪ್ಪಿಕೊಳ್ಳುತ್ತೇನೆ" – ಎಂದು ನ್ಯಾಯಮೂರ್ತಿಗಳು ತಮ್ಮ ಅರ್ಧಾಂಗಿಗೆ ಅನ್ಯಾಯ ಬಗೆಯದಂತೆ ಗೌರವ ಸಲ್ಲಿಸಿದರು. ಅಂದಿನ ಸಮಾರಂಭ ಒಂದು ರಸಗಳಿಗೆ ಆಯಿತು.

ನ್ಯಾಯಮೂರ್ತಿಗಳು ನ್ಯಾಯಮೂರ್ತಿಗಳಾಗಲಿಕ್ಕೆ ಅವರ ಕುಂಡಲಿಯೊಂದೇ ಕಾರಣವಾಗಿರಬಹುದೇ? ಸತ್ಯವನ್ನು 'ಕ್ಷ' ಕಿರಣದಿಂದ ಬಗೆಬಗೆದು ನೋಡುವ ಇಂದಿನ ವಿಜ್ಞಾನ ಯುಗದಲ್ಲಿಯೂ ಕುಂಡಲಿಯನ್ನೇ ಇಷ್ಟೊಂದು ಸಂಪೂರ್ಣವಾಗಿ ನೆಚ್ಚೋಣವೇ? ನ್ಯಾಯಮೂರ್ತಿಗಳು ಧರ್ಮ–ದೇವರು, ಜ್ಯೋತಿಷ್ಯದಲ್ಲಿ ನಂಬುಗೆಯುಳ್ಳವರು. ಅವರು ಕೇವಲ ಭಾವಿಕತನದಿಂದಲೇ ಸತ್ಯವನ್ನು ಮರೆಮಾಜಿದರೆಂದು ಹೇಳುವುದಕ್ಕಿಂತ ವಿನಯದಿಂದಲೇ ತಮ್ಮ ವಿದ್ಯಾ ಸಂಪನ್ನತೆಯನ್ನು ಮರೆ ಮಾಡಿದರೆಂದೆನ್ನಬಹುದು.'

ನ್ಯಾಯದಲ್ಲಿ ಉತ್ತಮ ಪದವಿಯನ್ನು ಸಂಪಾದಿಸಿ, ವಕೀಲಿ ವೃತ್ತಿಯನ್ನು ಪ್ರಾರಂಭಿಸಿದರು. ಅವರ ಸತ್ಯನಿಷ್ಠೆ, ನ್ಯಾಯಶಾಸ್ತ್ರ, ಪಾಂಡಿತ್ಯ, ವಾಕ್ಚಾತುರ್ಯಗಳು ಸರಕಾರದ ಅನುಗ್ರಹವನ್ನು ಸಂಪಾದಿಸಿದವು. ಸರಕಾರದ ಆಮಂತ್ರಣಕ್ಕೆ ಮೂರು ಸಲ ನಕಾರ ಹೇಳಿ ಆ ಮೇಲೆ ಸರಕಾರಿ ವಕೀಲಿ ವೃತ್ತಿಯನ್ನು ಅಂಗೀಕರಿಸಿದರು.

'ಏನೋ ಒಂದೊಂದೇ ಹೆಜ್ಜೆ ಮುಂದಿಟ್ಟಂತೆ ಸ್ಥಳ ತೆರವಾಗುತ್ತಿತ್ತು. ಅಂತೆ ಮತ್ತೊಂದು ಮತ್ತೊಂದು ಹೆಜ್ಜೆ ಮುಂದೆ ಹೋಯಿತು' ಎಂದರು ನ್ಯಾಯಮೂರ್ತಿಗಳು. ಅಂತಃಶಕ್ತಿಯಿಂದ ಮುನ್ನುಗ್ಗುವ ವೀರ, ತೆರವಿದ್ದಲ್ಲಿ ಹೆಜ್ಜೆ ಇಡುವುದಿಲ್ಲ. ಆತ ಹೆಜ್ಜೆ ಇಟ್ಟಲ್ಲಿ ತೆರವಾಗುತ್ತದೆ. ಹೈಕೋರ್ಟ ನ್ಯಾಯಮೂರ್ತಿಗಳಾಗಬೇಕೆಂದು ಎಷ್ಟೋ ಜನ ಹಂಬಲಿಸುವವರು. ಅದು ನಾರಾಯಣರಾಯರ ಕೊರಳಿಗೇ ಯಾಕೆ ಬೀಳಬೇಕು? ಆ ದಿನ ಸನ್ಮಾನ ಸಮಾರಂಭದಲ್ಲಿ ಸರ್ ಲಿಯೋನಾರ್ಡ ಸ್ಟೋನರು ಹೇಳಿದ ಸ್ವಾರಸ್ಯದ ಮಾತುಗಳೇ ಈ ಪ್ರಶ್ನೆಗೆ ಉತ್ತರ. ಪ್ರತಿಭೆ ಜೊತೆಗೆ ಪರಿಶ್ರಮ ಇವೇ ನ್ಯಾಯಮೂರ್ತಿಗಳನ್ನು ಈ ಮೂರ್ತ ಸ್ವರೂಪಕ್ಕೆ ತಂದಿವೆ.

ಈ ಪ್ರತಿಭೆ ರಾಯರಿಗೆ ಹಿರಿಯರ ತಲೆತಲೆಯಿಂದ ಇಳಿದು ಬಂದ ಅನುಗ್ರಹ.

ಲೋಕೂರ ಮನೆತನ ಸಾತಾರೆಯ ಶ್ರೀಮಂತ ಛತ್ರಪತಿ ಶಾಹೂ ಮಹಾರಾಜನ ಕಾಲದಿಂದಲೂ ಹೆಸರಾಂತು ನಡೆದು ಬಂದ ಇತಿಹಾಸ ಪ್ರಸಿದ್ಧವಾದ ಮನೆತನ. ಲೋಕೂರು ಕುರಂದವಾಡ ಸಂಸ್ಥಾನದಲ್ಲಿ ಒಂದು ಹಳ್ಳಿ. ವೆಂಕಟರಾಯರು ಶಾಹೂ ಮಹಾರಾಜನ ಸಮಕಾಲೀನರು. ಲೋಕೂರ ನಾಯಿಕ – ಪಾಟೀಲ ಮನೆತನದ ಮೂಲಪುರುಷರು. ಅಥಣಿಯ ಯುದ್ಧದಲ್ಲಿ ಸಂಪಾದಿಸಿದ ವಿಜಯದ ಕುರುಹಾಗಿ ವೆಂಕಟರಾಯರಿಗೆ ನಾಯಕತ್ವ ದೊರೆಯಿತು. ವೆಂಕಟರಾಯರ ಪಶ್ಚಾತ್ತದಲ್ಲಿ ಪಾಟೀಲ ವತನವು ಅವರ ಮಗ ರಾಮಜಿಪಂತರಿಗೆ ಬಂತು. ೧೯ನೆಯ ಶತಮಾನದ ಪ್ರಾರಂಭ. ರಾಮಜಿಪಂತರ ಕಿರಿಯ ಮಗ ನಾರಾಯಣರಾಯರು ಮಾಮಲೇದಾರರಾಗಿ ಲೋಕಪ್ರೀಯತೆಯನ್ನೂ ಸಂಪಾದಿಸಿದರು. ನಾರಾಯಣರಾಯರು ಅಥಣಿ ತಾಲೂಕು ಐನಾಪುರದಲ್ಲಿ ಆಸ್ತಿ ಮಾಡಿದರು. ಅಲ್ಲಿಯೇ ಮನೆಮಾಡಿಕೊಂಡು ನೆಲಸಿದರು. ಇಂದಿಗೂ ಚಿಕ್ಕೋಡಿಯ ಹಾದಿಯಲ್ಲಿರುವ ಸೇತುವೆಯನ್ನು ಅವರೇ ಕಟ್ಟಿಸಿದರು. 'ನಾರೋ ರಾಮಚಂದ್ರ' ಎಂದು ಅದರ ಮೇಲೆ ಹೆಸರು ಕೆತ್ತಿದುದು ಇಂದಿಗೂ ಕಂಡು ಬರುತ್ತದೆ.

ನಾರಾಯಣರಾಯರಿಗೆ ಮೂವರು ಮಕ್ಕಳು—ಅಪ್ಪುರಾಯ, ಶ್ರೀನಿವಾಸರಾಯ ಮತ್ತು ರಾಘವೇಂದ್ರರಾಯ. ನಾರಾಯಣರಾಯರ ಇಬ್ಬರು ಅಣ್ಣಂದಿರಿಗೂ (ಗೋಪಾಲರಾಯ, ಬಾಪೂರಾಯ) ಸಂತಾನ ವಿಲ್ಲದುದರಿಂದ ನಾರಾಯಣರಾಯರು ಬಾಪೂರಾಯರಿಗೆ ಶ್ರೀನಿವಾಸ ರಾಯರನ್ನೂ, ಗೋಪಾಲರಾಯರಿಗೆ ರಾಘವೇಂದ್ರರಾಯರನ್ನೂ ದತ್ತಕ ಕೊಟ್ಟರು. ದತ್ತಕವೆಂಬುದು ನಿಮಿತ್ತಕ್ಕೆ, ಮನೆತನ ಒಟ್ಟಾಗಿಯೇ ನಡೆಯಿತು. ನಾರಾಯಣರಾಯರ ಹಿರಿಯ ಮಗ ಅಪ್ಪುರಾಯರು ಸಂತಾನವಿಲ್ಲದೆ ಗತಿಸಿದರು. ರಾಘವೇಂದ್ರರಾಯರಿಗೆ ಸ್ವಾಮಿರಾವ್ ಎಂಬ ಮಗನೂ, ಶ್ರೀನಿವಾಸರಾಯರಿಗೆ ರಾಮರಾಯನೆಂಬ ಮಗನೂ ಇದ್ದರು. ಸ್ವಾಮಿರಾಯರು ತಾರುಣ್ಯದಲ್ಲಿಯೇ ಕಣ್ಮರೆಯಾದರು. ಇಡಿಯ ಕುಟುಂಬಕ್ಕೆ ಶ್ರೀನಿವಾಸರಾಯರ ಮಗ ರಾಮರಾಯರೊಬ್ಬರೆ ಮನೆತನದ ಹೊಣೆಗಾರರೂ, ಬಾಧ್ಯಸ್ಥರೂ ಆಗಿ ಉಳಿದರು.

ರಾಮರಾಯರು ಶೇಡಬಾಳಕ್ಕೆ ಬಂದು ಸೋದರಮಾವನ ಮನೆ ಯಲ್ಲಿ ಉಳಿದರು. ಅಲ್ಲಿಂದ ಅವರ ಕಕ್ಕಿ ವೆಂಕೂಬಾಯಿ (ವಿತಂತು) ಅವರನ್ನು ಐನಾಪುರಕ್ಕೆ ಕರೆದುಕೊಂಡು ಹೋದರು. ಅವರ ಪಾಲಿಗೆ ಸಾಕಷ್ಟು ಆಸ್ತಿ-ಪಾಸ್ತಿ ಇತ್ತು. ಅವರ ವಾತ್ಸಲ್ಯದ ಆಶ್ರಯದಲ್ಲಿ ರಾಮರಾಯರು ಶಿಕ್ಷಣ ಹೊಂದಿದರು. ರೆವಿನ್ಯೂ ಖಾತೆಯಲ್ಲಿ ಶಿರಸ್ತೆ ದಾರರಾದರು. ಮುಂದೆ ಅನಾರೋಗ್ಯದ ಮೂಲಕ ಅಥಣಿಗೆ ವರ್ಗ ಮಾಡಿಸಿಕೊಳ್ಳಬೇಕೆಂದು ಪ್ರಯತ್ನಿಸಿದರು. ಪ್ರಯತ್ನ ಫಲಿಸಲಿಲ್ಲ. ಸರಕಾರಿ ನೌಕರಿಗೆ ಶರಣು ಎಂದರು. ರಾಜೀನಾಮೆ ಕೊಟ್ಟು ಅಥಣಿ ಇಂಗ್ಲಿಷ್ ಶಾಲೆಯಲ್ಲಿ ಅಧ್ಯಾಪಕರಾದರು. ಐನಾಪುರದ ಕುಲಕರ್ಣಿ ಮನೆತನದೊಡನೆ ಶರೀರ ಸಂಬಂಧ ಬೆಳೆಯಿತು. ರಾಮರಾಯರ ಧರ್ಮಪತ್ನಿ ಸೀತಾಬಾಯಿ. ದಂಪತಿಗಳ ಬಾಳಬಳ್ಳಿಯು ಕುಡಿ ಹೂ ಬಿಟ್ಟಿತು. ಸೋದರಮಾವನ ಮನೆಯಲ್ಲಿ ನಾಳಿನ ನ್ಯಾಯಮೂರ್ತಿಯ ಮಾಟಮೂರ್ತಿಯ ಉದಯವಾಯಿತು. ಅಂದು ಎಪ್ರಿಲ್ ೨೧, ೧೮೮೭.

ಹುಟ್ಟಿದ ಆರನೆಯ ದಿವಸ ನ್ಯಾಯಮೂರ್ತಿಗಳು ವಿಪರೀತ ಹಟ ಮಾಡಹತ್ತಿದರು. (ನಾಳಿನ ನ್ಯಾಯಮೂರ್ತಿಯೆಂದು ಇಂದಿನ

# ಲೋಕೂರ ರಾಮರಾಯರು
(ನಾರಾಯಣರಾಯರ ತೀರ್ಥರೂಪರು)



(ರಾಮರಾಯರು ಶೇಡಬಾಳಕ್ಕೆ ಬಂದು ಸೋದರ ಮಾವನ ಮನೆಯಲ್ಲಿ ಉಳಿದರು)

ತಾಯಿಗೆ ತಿಳಿದಿದ್ದರೆ?) ಹಟವು ಸಾಮಾನ್ಯವಾಗಿರಲಿಲ್ಲ. ಮಗು ಏನೋ ಒಂದು ಅಸಮಾಧಾನದಿಂದ ಅಳುತ್ತಿರುವಂತೆ ಕಂಡಿತು. ಮನೆಯ ಆಚಾರ್ಯರು- ಕಟ್ಟಿ ವೆಂಕಟಾಚಾರ್ಯರು, ಏನೋ ಸೂಕ್ತವನ್ನು ಓದಿ ಕೊಂಡರು. ಸ್ವಾಮಿರಾಯರು ಸಂತಾನವಿಲ್ಲದೆ ಗತಿಸಿ ಹೋದರು. ಮಗುವಿಗೆ ತಂದೆಯ ಹೆಸರನ್ನು ರಾಮರಾಯನೆಂದು ಕರೆಯದೆ ಸ್ವಾಮಿ ರಾಯನೆಂದು ಕರೆಯಬೇಕೆಂದು ಸೂಚಿಸಿದರು. ಹಾಗೆಯೇ ಸ್ವೀಕೃತ ವಾಯಿತು. ಮಗುವಿನ ಕಿರಿ ಕಿರಿ ಕಡಿಮೆಯಾಯಿತು. ಇಂದಿಗೂ ಲೋಕೂರ ನಾರಾಯಣರಾಯರು ತಂದೆಯ ಹೆಸರನ್ನು ಸ್ವಾಮಿರಾಯ ಎಂದೇ ಬರೆಯುತ್ತಾರೆ. ದತ್ತಕ ವಿಧಾನವಾಗಿರದಿದ್ದರೂ ಭಾವನಾ ಪೂರ್ವಕವಾಗಿ ದತ್ತಕ ಮಗುವಾಗಿ ಗುರುತಿಸಲ್ಪಟ್ಟಿದ್ದಾರೆ.

ಸೋದರಮಾವನ ಮನೆಯಲ್ಲಿ ಹುಟ್ಟಿ, ಸೋದರಮಾವನ ಮನೆ ಯಲ್ಲಿ ಬೆಳೆದರು ಚಿಕ್ಕ ನ್ಯಾಯಮೂರ್ತಿಗಳು. ಆಗ ಅವರ ತಂದೆ ಇನ್ನೂ ಕಾಲೇಜ ವಿದ್ಯಾರ್ಥಿ. ಪುಣೆಯ 'ಫರ್ಗ್ಯೂಸನ್' ಕಾಲೇಜಿನಲ್ಲಿ ಮೊದಲನೆಯ ವರ್ಷದಲ್ಲಿ ಓದುತ್ತಿದ್ದರು. ಆಮೇಲೆ ಕುಟುಂಬವನ್ನು ಪುಣೆಗೇ ಕರೆದುಕೊಂಡು ಹೋದರು. ಮುಂದೆ ಬಿ. ಎ., ಪದವಿ ಸಂಪಾ ದಿಸುವ ಪೂರ್ವದಲ್ಲೇ ಕಾಲೇಜು ನಿಲ್ಲಿಸಿ, ಬೆಳಗಾಂವಿ ಕ್ಯಾಂಟೋನ ಮೆಂಟ್ ಮ್ಯಾಜಿಸ್ಟ್ರೇಟ್ ಕೋರ್ಟಿನಲ್ಲಿ ನೌಕರಿಗೆ ಹತ್ತಿದರು. ಆ ಮೇಲೆ ಶಿಕ್ಷಕರಾಗಿ ಅಥಣಿಗೆ ಬಂದರು. ಅಥಣಿಯಲ್ಲಿ 'ನಾನಾ' ಶ್ರೀ ಗಣೇ ಶಾಯ ನಮಃ ಸುರುವು ಮಾಡಿದರು.

ಅಂದಿನ ಚಿಕ್ಕ ನ್ಯಾಯಮೂರ್ತಿಗಳು ಇಂದಿನ ನಿವೃತ್ತ ನ್ಯಾಯ ಮೂರ್ತಿಗಳಾಗಿ ಉದಿತೋದಿತರಾಗಿ ಬೆಳೆದು ಬಂದರು. ಜೀವನದ ಹೊತ್ತಿಗೆಯಲ್ಲಿ ಚಿರಕಾಲ ಬಾಳುವಂತಹ ಅಮೌಲ್ಯ ಸಂಗತಿಗಳನ್ನು ರಕ್ತಾಕ್ಷರಗಳಿಂದ, ಸುವರ್ಣಾಕ್ಷರಗಳಿಂದ ಬರೆದರು.

ಈಗ ಲೋಕೂರ ನಾರಾಯಣರಾಯರಿಗೆ ನಾಲ್ವರು ಗಂಡು ಮಕ್ಕಳು, ಮೂವರು ಹೆಣ್ಣು ಮಕ್ಕಳು. ಹಿರಿಯ ಮಗ ಭೀಮರಾ ಯರು ಎಂ. ಎ., ಎಲ್‌ಎಲ್. ಬಿ. ಆಗಿ ನ್ಯಾಯ ಖಾತೆಯನ್ನೇ ಸೇರಿ ದ್ದಾರೆ. ಎರಡನೆಯವರು ವೆಂಕಟರಾಯರು ಎಂ. ಎ., ಎಲ್‌ಎಲ್. ಬಿ.

ಆಗಿ ಮುಂಬಯಿ ಹಾಯಕೋರ್ಟಿನಲ್ಲಿ ವಕೀಲಿ ನಡೆಸುತ್ತಿದ್ದಾರೆ. ಸರಕಾರಿ ವಕೀಲರಿಗೆ ಗೌರವ ಸಹಾಯಕರಾಗಿದ್ದಾರೆ. ಮೂರನೆಯ ವರು ವಾಮನರಾಯರು ಬಿ. ಎಸ್‌ಸಿ., ಆಗಿದ್ದಾರೆ. ಚಿಕ್ಕವರು ಮೋಹನರಾಯರು. ಇಬ್ಬರೂ ಪುಣೆಯ ಇಂಜನಿಯರಿಂಗ್ ಕಾಲೇಜಿನಲ್ಲಿ ಓದುತ್ತಿದ್ದಾರೆ.

ಹಿರಿಯ ಮಗಳು ಸೌ.ವನಮಾಲಾ ಭವಾಳಕರ, ಉಭಯ ಮನೆತನಕ್ಕೂ, ಕನ್ನಡ ಕುಲಕ್ಕೂ ಕೀರ್ತಿ ತಂದ ಪೆಣ್ಮಣಿ ಅವರು. ಎರಡನೆಯ ಮಗಳು ಸೌ. ಲೀಲಾ ಫಣಸಲಕರ—ಕಲಾವಿದೆ, ರಸಿಕಸಾಹಿತಿ. ಮೂರನೆಯ ಮಗಳು ಸೌ. ಶಶಿಕಲಾ, ಮ್ಯಾಟ್ರಿಕ್ ಪರೀಕ್ಷೆಗೆ ಕುಳಿತಿದ್ದಾರೆ ಈ ವರುಷ. ಜೀವನದ ಪರೀಕ್ಷೆಯಲ್ಲೇ ಅಪೂರ್ವ ಯಶಸ್ಸನ್ನು ದೊರಕಿಸುವ ಯೋಗ್ಯತೆಯುಳ್ಳವರಿಗೆ ವಿಶ್ವವಿದ್ಯಾನಿಲಯದ ಪರೀಕ್ಷೆ ಒಂದು **ಆಟವಷ್ಟೆ!**

ನ್ಯಾಯಮೂರ್ತಿಗಳು ಪುಣ್ಯವಂತರು, ಮಕ್ಕಳ ಸುಖ, ಮಡದಿಯ ಸುಖ, ಮನೆತನದ ಸುಖ; ನ್ಯಾಯಮೂರ್ತಿಗಳ ಮನೆಯಲ್ಲಿ ಶಾಂತತೆ ಮನೆಮಾಡಿಕೊಂಡಿದೆ. ಮಲಬಾರ ಬೆಟ್ಟದ ಮೇಲಿರುವರೆಂದು ಮಾತ್ರ ಮನೆ ಶಾಂತವಾಗಿಲ್ಲ. ಮಡದಿಮಕ್ಕಳಿಂದ ಬಂದ ಗೃಹಸುಖ ಚಿರಶಾಂತಿಯನ್ನು ತಂದಿದೆ. ಸಿರಿ-ಸರಸತಿಯರಿಬ್ಬರೂ ಸಖ್ಯದಿಂದ ನಲಿದಾಡುತ್ತಿದ್ದ ಮೇಲೆ ಮನೆಯಲ್ಲಿ ಅಶಾಂತಿಗೆ ಅವಕಾಶವೆಲ್ಲಿ? ಅತ್ತೆ-ಸೊಸೆ ಅಕ್ಕರೆಯಿಂದ ಇದ್ದ ಹಾಗೆ ಅಲ್ಲವೇ? ಆದರೆ ಇದಕ್ಕೆ ಪುಣ್ಯಬೇಕು. ಸೌಭಾಗ್ಯವತಿ ಲಕ್ಷ್ಮಿಬಾಯಿ ಯಾವ ವಿಶ್ವವಿದ್ಯಾನಿಲಯದ ಪದವಿ ಪಡೆದಿಲ್ಲ. ಆದರೆ ಜೀವನ ವಿಶ್ವವಿದ್ಯಾನಿಲಯದ ಚಾನ್ಸಲರಾಗುವ ಯೋಗ್ಯತೆ ಅವರದು. ಲಕ್ಷ್ಮಿಬಾಯಿ ಅಕ್ಷರಶಃ ಗೃಹಲಕ್ಷ್ಮಿ; ಹೆಚ್ಚಿನ ಶಿಕ್ಷಣವಿಲ್ಲವೆಂದು ಸನಾತನ ಶಿಷ್ಟಾಚಾರವಿಲ್ಲ. ದೊಡ್ಡವರ ಹೆಂಡತಿಯೆಂದು ಸಲ್ಲದ ಜಂಬವಿಲ್ಲ, ದೇವರು ದಿಂಡರಲ್ಲಿ ಭಕ್ತಿ, ವಿಶ್ವಾಸ. ಮನೆಗೆ ಬಂದು ಹೋಗುವ ಅತಿಥಿಗಳ ಬಗ್ಗೆ ಆದರ, ಗೌರವ.

ಇಂದು ಲಕ್ಷ್ಮಿಬಾಯಿ ಅವರು ಮನೆಗೆ ಅತಿಥಿಗಳು ಬಂದಾಗ ಹಳೆಯ ಹೆಣ್ಣು ಮಕ್ಕಳಂತೆ ಅಡುಗೆ ಮನೆಯಲ್ಲಿಯೇ ಅಡಗುವುದಿಲ್ಲ.

## ಲೋಕೂರ ಕುಟುಂಬ



ಮಕ್ಕಳಿಂದ ಕೀರ್ತಿ, ಮಡದಿಯಿಂದ ಸುಖ ಹೆಚ್ಚಿದ ಮೇಲೆ ಗೃಹಸ್ಥನಿಗೇನುಬೇಕು?

ನಿಂತವರು:— ಕು. ಶಶಿಕಲಾ, ಶ್ರೀ. ವೆಂಕಟೇಶ, ಸೌ. ವನಮಾಲಾ, ಶ್ರೀ. ಭೀಮರಾವ, ಶ್ರೀ. ಮೋಹನ.

ಕೂತವರು:— ಶ್ರೀ. ವಾಮನ, ಸೌ. ಲಕ್ಷ್ಮೀಬಾಯಿ. ಶ್ರೀ. ನಾರಾಯಣರಾಯರು, ಸೌ. ಲೀಲಾವತಿ.

ತೀರ ಸುಧಾರಿಸಿದವರೆಂದು ಬಂದವರೊಡನೆ ಕೈಕುಲುಕುವುದಿಲ್ಲ. ಆತಿಥ್ಯ ದಲ್ಲಿ ಯಾವಾಗಲೂ ಒಂದು ನಯ, ಒಂದು ಚೊಕ್ಕಟತನ. ತಮ್ಮ ಪ ರೆಂಬವರು ಬಂದಾಗ ಸ್ವಂತ ಕೈಯಿಂದಲೆ ಚಹ-ಉಪಹಾರ ಬಡಿಸು ವರು. ಕನ್ನಡ ಸಂಘ, ಮಹಿಳಾ ಕಾರ್ಯಕಲಾಪ ಯಾವುದೇ ವಿಷಯ ವಾಗಿರಲಿ ನಿಸ್ಸಂಕೋಚವಾಗಿ ಚರ್ಚಿಸುವರು. ಉತ್ಸಾಹ ವಹಿಸಿ ಕಾರ್ಯಕಲಾಪಗಳಿಗೆ ಸಹಕಾರ ನೀಡುವರು.

ಶ್ರೀಮತಿ ಲೋಕೂರ ಅವರು ಒಳ್ಳೇ ಆಟಗಾರ್ತಿ. ಅಂತೇ ಜೀವನ ವನ್ನೇ ಒಂದು ಆಟವೆಂದು ಬಗೆದು ನೋಡುವ ಕವಿಯ ದೃಷ್ಟಿ. ವೇದಾಂತಿಯ ತಿಳುವು ಅವರಿಗಿದೆ. 'ಬ್ಯಾಡ್‌ಮಿನ್‌ಟನ್-ಟೇನಿಸ್ ಆಟಗಳಲ್ಲಿ ಅನೇಕ ಪಾರಿತೋಷಕ ಸಂಪಾದಿಸಿದ್ದಾರೆ' ಎಂದು ನ್ಯಾಯ ಮೂರ್ತಿಗಳು ತಮ್ಮ ಶ್ರೀಮತಿಯವರ ಸಿದ್ಧಿಗೆ ಹೆಮ್ಮೆ ತಾಳಿ ನುಡಿದರು.

"ನನಗೆ ಗೃಹಕೃತ್ಯದ ಯಾವ ತೊಂದರೆಯೂ ಇಲ್ಲ, ಗಳಿಸಿ ತಂದಷ್ಟು ಹಣ ಗೃಹಲಕ್ಷ್ಮಿಯ ಸ್ವಾಧೀನ ಮಾಡಿಬಿಡುತ್ತೇನೆ. ಯಾವ ಗೋಜಿಗೂ ಹೋಗುವುದಿಲ್ಲ. ಲೆಕ್ಕಪತ್ರ ಸಹಿತ ಎಲ್ಲಾ ಅವರೇ ನೋಡಿಕೊಳ್ಳುತ್ತಾರೆ"--ಎಂದು ಕೌಟುಂಬಿಕ ನಾರಾಯಣರಾಯರು ಸಂಸಾರದಲ್ಲಿ ಪೂರ್ಣ ತೃಪ್ತಿಯನ್ನು ಪಡೆದ ಗೆಲುವಿನಿಂದ ಮಾತನಾಡಿ ದರು. ಮಕ್ಕಳಿಂದ ಕೀರ್ತಿ, ಮಡದಿಯಿಂದ ಸುಖ ಹೆಚ್ಚಿದ ಮೇಲೆ ಗೃಹಸ್ಥನಿಗೇನು ಬೇಕು? ಗಂಡಸು ಮಕ್ಕಳು ಶಿಕ್ಷಣ ಪಡೆದು ಗಳಿಸಿ, ಮನೆತನ ಮುಂದರಿಸಿ, ಹಿರಿಯರ ಹೆಸರನ್ನು ಉಳಿಸುತ್ತಾರೆ. ಹೆಣ್ಣು ಮಕ್ಕಳು ತಮ್ಮ ಸದ್ಗುಣ ಸದಾಚಾರಗಳಿಂದ ಅತ್ತೆಯ ಮನೆಯಲ್ಲಿ ಅಹುದೆನಿಸಿಕೊಂಡು ಹಡೆದ ತಂದೆಗೆ ಹೆಸರು ತರುತ್ತಾರೆ. ಲೋಕೂರ ನಾರಾಯಣರಾಯರು ಉಭಯ ರೀತಿಯಲ್ಲೂ ದೇವರಿಂದ ಅನುಗ್ರಹಿಸ ಲ್ಪಟ್ಟಿದ್ದಾರೆ. ಮುಪ್ಪಿನ ಕಾಲಕ್ಕೆ ಯಾವ ಕೊಂಕು ಇಲ್ಲದೆ, ಮನೆತನ ಘನತೆವೆತ್ತು ಉತ್ತರೋತ್ತರಾಭಿವೃದ್ಧಿಯನ್ನು ಹೊಂದುತ್ತಿರುವುದು ದೇ ವರ ಕರುಣೆ, ಹಿರಿಯರ ಪುಣ್ಯವೆಂದೆನ್ನಬೇಕು. ಮಧ್ಯಮ ತರಗತಿಯ ಮನೆತನಗಳಲ್ಲಿ ಮನೆಯ ಯಜಮಾನ ನಿವೃತ್ತನಾಗಿ ಮಡದಿ-ಮಕ್ಕಳು ಮೊಮ್ಮಕ್ಕಳುಗಳಿಂದ ಸುಖ ಪಡೆದು, ಮನೆತನವು ಉನ್ನತ ಶಿಖರವನ್ನೇ

ರುವುದನ್ನು ಕಂಡು ಕೃತಾರ್ಥನಾಗುವುದು ತೀರಾ ಕಡಿಮೆ. ಎಲ್ಲಿಯೋ ಒಂದೆಡೆಗೆ ಭಟ್ಟ ಕಟ್ಟಿರುತ್ತದೆ. ಮಕ್ಕಳು ಕುಶಲರಿದ್ದರೆ, ಮಕ್ಕಳಿಗೆ ಉಚ್ಚ ಶಿಕ್ಷಣ ಕೊಡುವ ಆರ್ಥಿಕ ಶಕ್ತಿ ತಂದೆಗಿರುವುದಿಲ್ಲ. ಆರ್ಥಿಕ ಬಲವಿದ್ದಲ್ಲಿ ಮಕ್ಕಳು ಅವಿವೇಕಿಗಳಿರುತ್ತವೆ. ಲೋಕೂರ ಮನೆತನ ವೊಂದು ಆದರ್ಶ ಕುಟುಂಬ.

"ನನಗೆ ಮನೆತನದ ಯಾವ ತಾಪತ್ರಯವೂ ಇಲ್ಲ. ಹೆಣ್ಣು ಮಕ್ಕಳು ಒಳ್ಳೆಯ ಮನೆಗೆ ಹೋಗಿದ್ದಾರೆ. ಗಂಡು ಮಕ್ಕಳು ಸುಶಿಕಿತ ರಾಗಿ ತಮ್ಮ ಕಾಲಮೇಲೆ ತಾವು ನಿಂತಿದ್ದಾರೆ"—ಎಂದು ತುಂಬಿದ ತೃಪ್ತಿಯ ಭಾವದಿಂದ ರಾಯರು ಮಾತನಾಡಿದಾಗ ನನ್ನ ಹೃದಯದಲ್ಲಿ ಏನೋ ಒಂದು ಹೇಳಲಾಗದ ಹಿಗ್ಗಿದ ತೆರೆಯೊಂದು ಉಕ್ಕಿ ಬಂತು.

ನನಗೆ ಮತ್ತೆ ಮತ್ತೆ ಅದೇ ಪ್ರಶ್ನೆ. ನ್ಯಾಯಮೂರ್ತಿಗಳು ತಮ್ಮ ಜೀವನದಲ್ಲಿ ಈ ಮಟ್ಟಕ್ಕೆ ಬಂದು ಮುಟ್ಟಿದುದು ಕೇವಲ ಈಶಸಂಕ ಲ್ಪವೋ—ಸ್ವಂತ ಸಾಹಸವೋ ಎಂದು. 'ದೈವಾಯತ್ತಂ ಕುಲೆ ಜನ್ಮ, ಮದಾಯತ್ತಂತು ಪೌರುಷಂ' ಎಂದು ಕರ್ಣನು ನುಡಿಯಲಿಲ್ಲವೇ?

ನ್ಯಾಯಮೂರ್ತಿಗಳು ತಮ್ಮ ಜೀವನದುದ್ದಕ್ಕೂ ಅಚ್ಚುಕಟ್ಟುತನ ವನ್ನು ಕಾಯ್ದುಕೊಂಡು ಬಂದಿದ್ದಾರೆ. ಇಂದಿಗೆ ಅರುವತ್ತು ವಯ ಸ್ಸಾದರೂ ಸದೃಢವಾಗಿ ದೇಹ ಪ್ರಕೃತಿಯನ್ನು ಕಾಪಾಡಿಕೊಂಡು ಬಂದಿ ದ್ದಾರೆ. ಸದೃಢವಾದ ಕಾಯವಿದ್ದರೆ ಸದೃಢವಾದ ಮನಸ್ಸಿರುತ್ತದೆ. ಸಾಮಾನ್ಯವಾಗಿ ಅಸಾಮಾನ್ಯ ವ್ಯಕ್ತಿಗಳೆನ್ನುವವರಲ್ಲಿ ಅಸಾಮಾನ್ಯ ಚಟಗಳೇ ಬಹಳ. ರಾತ್ರಿಯೆಲ್ಲ ನಿದ್ದೆಗೆಟ್ಟು ಓದುವುದು, ಇಲ್ಲವೆ ಬರಿ ಯುವುದು. ಓದು ಬರೆಯುವುದಕ್ಕೆ ಸ್ಫೂರ್ತಿಯ ಕಪ್ಪು ತಾಸಿಗೊಮ್ಮೆ ಬೇಕೇ ಬೇಕಲ್ಲ. ಹೀಗಾಗಿ ಪುಸ್ತಕ ಪಠಿಸಿ ತಲೆಗೆ ಟಾನಿಕ್ ದೊರೆತು ತಲೆಯೇನೊ ಹಿಮಾಲಯವಾಗಬಹುದು; ಆದರೆ ದೇಹ ಸೌಷ್ಠವ ಹಿಂಗಿ ಕೈಕಾಲು ಕಸಪೊರಿಕೆಯ ಕಡ್ಡಿಯಂತಾದರೆ ಉಪಯೋಗವೇನು?

ಮಹಾವ್ಯಕ್ತಿಗಳ ದಿನಚರಿಯೇನು? ಅವರ ನಿತ್ಯದ ಓದು–ಬರೆ ಹದ ಕ್ರಮ ಹೇಗೆ? ಅವರ ತಿಂಡಿತಿನಸುಗಳು, ಆಹಾರ–ವಿಹಾರಗಳು, ಉಡಿಗೆತೊಡಿಗೆಗಳೆಲ್ಲವನ್ನು ತಿಳಕೊಳ್ಳುವ ಕುತೂಹಲ ನನಗೆ ಹೆಚ್ಚು.

ಜವಾಹರಲಾಲರ ದಿನಚರಿ ಜಗತ್ತಿಗೇ ಗೊತ್ತು. ಕೇಂದ್ರ ಸರಕಾರದ ಉಪಾಧ್ಯಕ್ಷರಾದ ಮೇಲೆ ಮಂತ್ರಿಮಂಡಲ ಕಚೇರಿಯನ್ನು ನಡಸಹತ್ತಿದರು. ಬಿಳಿಮೊಗದವರೂ ಇವರ ಕೈಕೆಳಗೆ ದುಡಿಯಬೇಕು. 'ಜೀಯಾ ಹಸಾದ' ಎನ್ನಬೇಕು. ಬಿಳಿಮುಖಗಳು ಕಚೇರಿಯ ವೇಳೆಗೆ ಸರಿಯಾಗಿ ಬಾರದಿದ್ದುದಕ್ಕೆ ಎಚ್ಚರಿಕೆ ಕೊಟ್ಟರಂತೆ- ಉಪಾಧ್ಯಕ್ಷರು. 'ನಾವು ಲಂಚ್(Lunch)ಮುಗಿಸಿಕೊಂಡು ಬರಬೇಕಾದರೆ ಹೊತ್ತಾಗುತ್ತದೆ' ಎಂದರಂತೆ ಅವರು. 'ಅಖಿಲ ಹಿಂದುಸ್ಥಾನದ ಕೇಂದ್ರ ಕಚೇರಿ ನಿಮ್ಮ ಲಂಚಿಗಾಗಿ ತಡೆಯಲಾರದು' ಎಂದರಂತೆ. ಜವಾಹರರು ಕಚೇರಿಗೆ ಹೋಗುತ್ತಿದ್ದುದು ಹನ್ನೊಂದಕ್ಕೆ ಐದು ನಿಮಿಷವಿದ್ದಾಗ. ಈ ಅಚ್ಚುಕಟ್ಟುತನವೇ ಅವರನ್ನು ಇಂದು ಅಂತರ ರಾಷ್ಟ್ರೀಯ ಗಣ್ಯವ್ಯಕ್ತಿಗಳನ್ನಾಗಿ ಮಾಡಿದೆ.

ಮಹಾತ್ಮಾ ಗಾಂಧಿಯವರಂತೂ ಗಡಿಯಾರದ ಟಿಕ್, ಟಿಕ್ ಶಬ್ದಕ್ಕೆ ತಾಲಹಾಕುವಂತೆ ಹೆಜ್ಜೆ ಇಡುತ್ತಾರೆ. ಒಂದು ಕೈಯಿಂದ ಬರೆದರೆ ಆಗದೆ ಎರಡೂ ಕೈಯಿಂದ ಬರೆಯುತ್ತಾರೆ. ಊಟಮಾಡುವಾಗ, ಪೇಯ ಕುಡಿಯುವಾಗ ಮುಂದಿನ ಕಾರ್ಯದ ಆಲೋಚನೆ ನಡೆಯುತ್ತದೆ.

ಆರೋಗ್ಯ ಸಂರಕ್ಷಣೆ, ವೇಳೆಯ ಸದ್ವಿನಿಯೋಗ ಇವು ನಾರಾಯಣರಾಯರ ಜೀವನದ ಬೀಜಮಂತ್ರಗಳಾಗಿವೆ. ಇವೊತ್ತಿಗೂ ಅವರು ನಸುಕಿನಲ್ಲಿ ಐದು ಗಂಟೆಗೆ ಏಳುವರು. ತೀರ್ಪು ಬರೆಯಲು ತೊಡಗುವರು.

"ಬೆಳಗ್ಗೆ ಆರೂವರೆಯಿಂದ ಎಂಟರ ವರೆಗೆ ತಿರುಗಾಟವನ್ನು ನಾನು ಒಂದು ದಿನವೂ ತಪ್ಪಿಸುವದಿಲ್ಲ. ಈ ಮೊದಲು ಟೇನಿಸ್ ಆಡುತ್ತಿದ್ದೆ. ಈಗ ತಿರುಗಾಡಿ ಬರುತ್ತೇನೆ. ಮಲಬಾರ ಬೆಟ್ಟದ ಮೇಲೆ ಉಷಃ ಕಾಲದ ಶಾಂತ ವಾತಾವರಣದಲ್ಲಿ, ಪ್ರಕೃತಿಯ ರಮಣೀಯತೆಯಲ್ಲಿ ತಿರುಗಾಡುವದು ಬಹಳ ಆರೋಗ್ಯಕರವೆನಿಸುತ್ತದೆ" — ಎಂದರು. ಒಮ್ಮೆ ಮಲಬಾರ ಬೆಟ್ಟದ ನೆತ್ತಿಯ ಮೇಲೆ ನಿಂತು ಸುತ್ತಲಿನ ಮಹಾನಗರದ ವಿಹಂಗಮ ನೋಟವನ್ನು ಕಣ್ಣಾರೆ ನೋಡಿ ಕುಡಿವವರಿಗೇ

ಗೊತ್ತು ಅದರ ಸುಖ.

ಬಿಡುವಿನ ವೇಳೆಯಲ್ಲಿ ಸಂಸ್ಕೃತ ಅಭ್ಯಾಸವನ್ನು ಇನ್ನೂ ಬಿಟ್ಟಿಲ್ಲ. ಸಂಗೀತವಂತೂ ಅವರಿಗೆ ಬಾಳಿನ ಬೇಸರ ಮರೆಯಲಿಕ್ಕೆ ಒಂದು ಔಷಧ. ರಾಯರ ಮನೆಗೆ ಹೋದಾಗೊಮ್ಮೆ ರೇಡಿಯೊ ಸಂಗೀತನಾದ ಮನೆಯನ್ನು ತುಂಬಿ ಬಿಟ್ಟಿರುತ್ತದೆ. ಭೆಟ್ಟಿಗೆಂದು ಹೋದಾಗಲೆಲ್ಲ ರಾಯರು ರೇಡಿಯೋ ಬಟನ್ ಬಂದುಮಾಡೇ ಹೊರಗೆ ಬರುತ್ತಿದ್ದರು.

"ನನಗೆ ಸಿಗರೇಟು, ಬಾಟಲಿಗಳ ಚಟವಿಲ್ಲ"ವೆಂದು ರಾಯರು ಅಭಿಮಾನದಿಂದ ಹೇಳಿದರು. ಎಷ್ಟೋ ಸಲ ದೊಡ್ಡದೊಡ್ಡವರ ಗುಂಪಿನಲ್ಲಿ ಎಷ್ಟೋ ತರಹದ ಕಟ್ಟಾಯಕ್ಕೆ ಬಲಿಬೀಳುವ ಪ್ರಸಂಗ ಬಂದರೂ ರಾಯರು ತಮ್ಮನ್ನು ಮಾರಿಕೊಂಡಿಲ್ಲ. ತಮ್ಮ ಸಂಕಲ್ಪವನ್ನು ಶಿಥಿಲಗೊಳಿಸಿಲ್ಲ.

ಇಂತಹ ಕ್ರಮಬದ್ಧವಾದ ಜೀವನ ರಾಯರದು. ನಿತ್ಯ ಸಂಧ್ಯಾವಂದನೆ, ದೇವರ ಪೂಜೆಗಳು ಒಮ್ಮೆಯೂ ನಿಂತಿಲ್ಲ. ದೇವರಲ್ಲಿ ದೃಢವಾದ ವಿಶ್ವಾಸ.

'Do your best and leave the rest to God' ಎಂದು ನುಡಿದರು. ಈ ವಾಕ್ಯದ ಸತ್ವವನ್ನು ತಮ್ಮ ನೆತ್ತರದಲ್ಲಿ ರಾಯರು ಅಳವಡಿಸಿಕೊಂಡಿದ್ದಾರೆ. ಕೇವಲ ದೈವಾಧೀನರಾಗಿ ಎಲ್ಲಾ ನಶೀಬದ ಮೇಲೆ ಹಾಕಿ ಕೈಯೆತ್ತಿ ನಿಲ್ಲುವ ನಿರ್ಬಲ ದೈವವಾದಿತ್ವ ಇವರದಲ್ಲ—ಅನಾಸಕ್ತಿ ಯೋಗಿಯ ನಿಷ್ಕಾಮ ಕರ್ಮವಾದಿತ್ವ ಇವರದು. "**ಯತ್ನೆ ಕೃತೇಪಿಯದಿ ನ ಸಿಧ್ಯತಿ ಕೋತ್ರ ದೋಷಃ**" ಎಂದರು. ದುಡಿಯಿರಿ ಇಲ್ಲವೆ ಮಡಿಯಿರಿಯೆಂಬುವವಕ್ಕಿಂತ ಮಡಿಯುವ ವರೆಗೂ ದುಡಿಯಿರಿ ಎಂಬುದು ನ್ಯಾಯಮೂರ್ತಿಗಳ ಜೀವನ ಮಂತ್ರ.

'Don't rest lest you may rust,' ಇದೇ ನಾನು ನಿಮಗೆ ಹೇಳಬಹುದಾದ ಬಾಳಿನ ಗುಟ್ಟು—ಎಂದು ರಾಯರು ನುಡಿದರು. ದೈವದಲ್ಲಿ ನಂಬುಗೆಯಿದ್ದವರು ಕರ್ಮವನ್ನು ಬಿಡದವರು—ಇದುವೆ ರಾಯರ ತತ್ವದ ತಿರುಳು. ಇದೊಂದು ತಿರುಳೆ ಅವರ ಬಾಳ

ಬಳ್ಳಿಗೆ ಬಂಗಾರದ ಕುಡಿಯೊಡಿಸಿದೆ.

೪

ನ್ಯಾಯಮೂರ್ತಿ ನಾರಾಯಣರಾಯರು ಕೀರ್ತಿವಂತ ಕನ್ನಡಿಗರು. ತಮ್ಮ ನ್ಯಾಯವೃತ್ತಿಯ ಮೂಲಕ ಅವರಿಂದು ನಮ್ಮ ನಾಡಿನ ಗಣ್ಯ ವ್ಯಕ್ತಿಗಳಷ್ಟೇ ಅಲ್ಲ ಅಖಿಲ ಹಿಂದುಸ್ಥಾನದಲ್ಲಿಯೇ ಗಣ್ಯವ್ಯಕ್ತಿ ಗಳಾಗಿದ್ದಾರೆ.



ನ್ಯಾಯಮೂರ್ತಿಗಳು ನಿವೃತ್ತರಾಗುವ ಮೊದಲೇ ಮುಂಬಯಿ-ಸಿಂಧ ಪಬ್ಲಿಕ್ ಸರ್ವಿಸ್ ಕಮೀಶನ್‌ದ ಅಧ್ಯಕ್ಷ ಸ್ಥಾನವನ್ನು ಸ್ವೀಕರಿಸಲು ಸರಕಾರದವರು ನ್ಯಾಯಮೂರ್ತಿಗಳಿಗೆ ಆಮಂತ್ರಿಸಿದರು. ನ್ಯಾಯಮೂರ್ತಿಗಳು ಒಪ್ಪಿಕೊಳ್ಳಲಿಲ್ಲ. ದಿಲ್ಲಿಯ ಪಬ್ಲಿಕ್ ಸರ್ವಿಸಿನ ಅಧ್ಯಕ್ಷ ಸ್ಥಾನದ ಕರೆ ಬಂತು. ಅದನ್ನೂ ಒಪ್ಪಿಕೊಳ್ಳಲಿಲ್ಲ. ಕೊನೆಗೆ ಕೊಲ್ಹಾಪುರದ ಮುಖ್ಯ ನ್ಯಾಯಮೂರ್ತಿ ಸ್ಥಾನವನ್ನು ಸ್ವೀಕರಿಸಿದರು.

ಒಮ್ಮೊಮ್ಮೆ ಮಾತುಮಾತಿನಲ್ಲಿ ನ್ಯಾಯಮೂರ್ತಿಗಳು ಅಖಿಲ ಭಾರತ ಮಹಾವ್ಯಕ್ತಿಗಳನ್ನು ಕುರಿತು ಸಹಜವಾಗಿ ಸೂಚನೆಗಳನ್ನು ಮಾಡುತ್ತಿರುವುದು ನನಗೊಳ್ಳೇ ಸೋಜಿಗವೆನಿಸಬೇಕು. ಲೋಕೂರ ರೆಂದರೆ ಎಷ್ಟೊಂದು ಲೋಕಪ್ರಿಯರಾಗಿದ್ದಾರಲ್ಲ—ಎಂದು ನನ್ನೊಳಗೆ ನಾನು ಉದ್ಗಾರವೆತ್ತುತ್ತಿದ್ದೆ. 'ಮೊನ್ನೆ ನಮ್ಮಲ್ಲಿ ಖೇರರೂ, ಪಕ್ವಾಸಾ ಅವರೂ ಊಟಕ್ಕೆ ಬಂದಾಗ ಹೀಗೆ ಮಾತು ಹೊರಟಿತ್ತು' ಎಂದು ಒಮ್ಮೆ ಹೇಳಬೇಕು. ಇನ್ನೊಂದು ಸಂದರ್ಭದಲ್ಲಿ 'ಆ ದಿನ ವಲ್ಲಭ ಭಾಯಿಯವರನ್ನು ಕಂಡಾಗ ಹೀಗೆ ಮಾತನಾಡಿದರು' ಎನ್ನಬೇಕು.

ಒಮ್ಮೆ ನ್ಯಾಯಮೂರ್ತಿಗಳನ್ನು ಕಾಣುವುದಕ್ಕೆಂದು ಹೋದಾಗ ಕೇಂದ್ರ ಸರಕಾರದ ಮಂತ್ರಿ ಚುಂದ್ರಿಗಾರರು ನ್ಯಾಯಮೂರ್ತಿಗಳ ದರ್ಶನಕ್ಕಾಗಿ ಬಂದಿದ್ದರು. ಅವರು ಚುಂದ್ರಿಗಾರರೆಂಬುದು ಅವರು ಮಾತುಕಥೆ ಮುಗಿಸಿ ಹೋದ ಮೇಲೆ ನ್ಯಾಯಮೂರ್ತಿಗಳಿಂದ ತಿಳಿದು ಬಂತು.

ಡ್ಯಾ. ಜಯಕರ, ಭುಲಾಭಾಯಿ ದೇಸಾಯಿ, ಅಂಥವರಂತೂ ನ್ಯಾಯಮೂರ್ತಿಗಳೊಡನೆ ಒಂದೇ ಪ್ರವಾಹದಲ್ಲಿ ಈಸಿದವರು. ನ್ಯಾಯ

ಮೂರ್ತಿಗಳ ಮುಂದೆ ಭುಲಾಭಾಯಿಯವರು ಅನೇಕ ಸಲ ಖಟ್ಲೆ ನಡಸಿದ್ದಾರೆ.

ಸರ್ವ ಸಾಮಾನ್ಯರಂತೆ ಒಂದು ವಕೀಲಿ ವೃತ್ತಿಯನ್ನೇ ಅವಲಂಬಿಸಿ ನಿಂತುಕೊಂಡ ಲೋಕೂರ ನಾರಾಯಣರಾಯರು ನ್ಯಾಯಮೂರ್ತಿಗಳಾಗಿ ಇಂದು ಇಡಿಯ ಹಿಂದುಸ್ಥಾನದಲ್ಲಿ ನ್ಯಾಯ ಕ್ಷೇತ್ರದಲ್ಲಿ ವಂದ್ಯ ವ್ಯಕ್ತಿಗಳಾಗಿದ್ದಾರೆ. ಅದು ಹೇಗೆ? ವಕೀಲರಾಗಿಯೂ ನ್ಯಾಯ ಮಾರ್ಗವನ್ನು ಅವರು ಬಿಡಲಿಲ್ಲ ನ್ಯಾಯಮೂರ್ತಿಗಳಾದ ಮೇಲಂತೂ ನ್ಯಾಯಮೂರ್ತಿಗಳೇ ಆದರು.

ನಮ್ಮಲ್ಲಿ ವಕೀಲ ಶಬ್ದಕ್ಕೆ ಅನೇಕ ರೀತಿ ಅರ್ಥ ಮಾಡುತ್ತಾರೆ. ವಕೀಲನೆಂದರೆ ಆತನೂ ನ್ಯಾಯವಂತ, ನೀತಿವಂತನಾಗಿರುತ್ತಾನೆಂದು ನಂಬುವವರು ಕಡಿಮೆ. ವಕೀಲನೆಂದರೆ— ಯಾವ ಪಕ್ಷವನ್ನೇ ವಹಿಸಿರಲಿ—ಆತನೊಬ್ಬ ಸುಳ್ಳಿನ ಕಂತೆ, ಸುಳ್ಳು ನಾರಾಯಣನೆಂದು ಲೋಕದ ಭಾವನೆ. ಲೋಕೂರ ನಾರಾಯಣರಾಯರು ವಕೀಲಿ ಪ್ರಾರಂಭದಿಂದಲೇ ಸತ್ಯನಾರಾಯಣರಾಗಿ ಲೋಕಪ್ರೀತಿಯನ್ನು ಸಂಪಾದಿಸಿದ್ದಾರೆ.

ವಕೀಲನೆಂದರೆ ಪಕ್ಷಪಾತಿಯಾಗಿರಬೇಕೆಂಬುದಂತೂ ಸರಿಯೆ. ಆದರೆ ಆತ ಸತ್ಯ ಪಕ್ಷಪಾತಿ, ನ್ಯಾಯ ಪಕ್ಷಪಾತಿಯಾಗಿದ್ದರೆ ಲೋಕವು ಅವನಲ್ಲಿ ವಿಶ್ವಾಸವಿಡುತ್ತದೆ. ಸರಿ, ಎಲ್ಲರೂ ಸತ್ಯ ಪಕ್ಷವನ್ನೇ ಎತ್ತಿ ಹಿಡಿದರೆ ಇನ್ನೊಂದು ಪಕ್ಷದವರ ಗತಿಯೇನು? ವಕೀಲರ ರಥ ಸಾಗುವ ಬಗೆ ಹೇಗೆ? ಎಂದು ಯಾರಾದರೂ ಕೇಳಬಹುದು. ವಕೀಲನ ಕಡೆಗೆ ಒಂದು ಪ್ರಕರಣ ಬಂದ ಕೂಡಲೆ ಅದು ಸತ್ಯವೊ ಅಸತ್ಯವೊ ಆತನಿಗೆ ಹೇಗೆ ಗೊತ್ತಾಗಬೇಕು? ಬಾಸ್ವೆಲ್‌ನು ಒಮ್ಮೆ ಜಾನ್ಸನ್‌ನನ್ನು ಕೇಳಿದನಂತೆ— 'ಸರ್, ಕೆಟ್ಟಪಕ್ಷವನ್ನು ವಕೀಲನು ಅಂಗೀಕರಿಸ ಬಹುದೊ?' ಜಾನ್ಸನ್‌ನು ಉತ್ತರ ಕೊಟ್ಟ—'ನ್ಯಾಯಾಧೀಶನ ನಿರ್ಣಯದ ಮೊದಲು ಅದು ಕೆಟ್ಟದು–ಒಳ್ಳೇದು ನಿನಗೆ ಗೊತ್ತಿರುವುದೆ?'

ವಕೀಲನು ಯಾವಾಗಲೂ ಪೂರ್ವಗ್ರಹಿಕೆಯಿಂದ ದೂರಾಗಿರ ಬೇಕು. ವಕೀಲನಿಗೂ, ವಿವೇಕಕ್ಕೂ ಸಂಬಂಧವಿಲ್ಲೆಂದು ತಿಳಿಯು

ವುದು ತಪ್ಪು. ಒಬ್ಬ ಪಕ್ಷಗಾರ ಅಪರೂಪವಾಗಿ ತನ್ನ ಕಡೆಗೆ ಬಂದ ನೆಂದು ಉತ್ಸಾಹದಲ್ಲಿ ಆತ ತಂದ ಪ್ರಕರಣವು ಅಸತ್ಯ, ಅನ್ಯಾಯ ದ್ದೆಂಬುದು ವಕೀಲನಿಗೆ ಗೊತ್ತಿದ್ದರೆ, ಅದನ್ನು ವಕೀಲನು ಸ್ವೀಕರಿಸ ಬಾರದು– ಫೀ ಎಷ್ಟೇ ಇರಲಿ—ಎಂದು ನ್ಯಾಯಮೂರ್ತಿಗಳು ಒಂದೆಡೆ ಉಸುರಿದ್ದಾರೆ.

**'If an adoption has taken place in your presence, you should not accept a brief to prove that it did not take place.'**

(ನಿಮ್ಮ ಕಣ್ಣಮುಂದೆ ಒಂದು ದತ್ತಕ ವಿಷಯ ನಡೆದಿದ್ದರೆ ದತ್ತಕ ಆಗಿಲ್ಲವೆಂದು ತೋರಿಸಿ ಕೊಡಲಿಕ್ಕೆ ನೀವು ತೊಡಗಬಾರದು.) ನ್ಯಾಯಮೂರ್ತಿಗಳು ಕಾಯಿದೆ ವಿದ್ಯಾರ್ಥಿಗಳಿಗೆ ಒಂದೆಡೆಗೆ ಕೊಟ್ಟ ಉಪದೇಶವಿದು.

ಪಕ್ಷಗಾರರ ಮುಂದೆ ತಮ್ಮ ಕಹಳೆಯನ್ನು ಪುಟಿಸಿ, ಗುಡ್ಡ ದಂತಹ ಮಾತನಾಡಿ ಪಕ್ಷಗಾರನನ್ನು ಗೆದಿಸಿ ಬಾವುಟ ಹಾರಿಸಿ ಬಿಡು ವಂತಹ ಸುಳ್ಳು ವಚನವನ್ನು ವಕೀಲನು ಮಾಡಬಾರದು. ಆದರೆ ಹಾಗೆ ಮಾಡದವರನ್ನು ಪಕ್ಷಗಾರನು, ನೆಮ್ಮುವುದೆ ಇಲ್ಲ. ಇದು ಲೋಕ ರೂಢಿ ಇದ್ದರೂ ವಕೀಲನು ಹೊರಗಿನ ಮೆರೆವಣಿಗೆ ಮಾಡದೆ ಸತ್ಯ-ನ್ಯಾಯಗಳನ್ನೇ ಅಂಟಿಕೊಂಡಿದ್ದರೆ ಇಂದಿಲ್ಲ ನಾಳೆ ಅವನು ಕೀರ್ತಿವಂತನಾಗುವನು—ಎಂದು ನ್ಯಾಯಮೂರ್ತಿಗಳು ಅನೇಕ ಕಡೆ ಗಳಲ್ಲಿ ಉಪದೇಶ ಮಾಡಿದ್ದಾರೆ. ನ್ಯಾಯಮೂರ್ತಿಗಳು ಇಂಥ ಇಷ್ಟೊಂದು ಹೆಸರಾಂತವರಾದ ರಹಸ್ಯ ಇಲ್ಲೇ ಕಂಡು ಬರುತ್ತದೆ.

ಕಾಯಿದೆಯಲ್ಲಿಯೂ ನೀತಿಯೆಂಬುದಿದೆ, ನ್ಯಾಯವೆಂಬುದಿದೆ, ಸತ್ಯವೆಂಬುದಿದೆಯೆಂಬುದನ್ನು ವಕೀಲನು ಅರಿತಿರಬೇಕು—ಕಾಯಿದೆ ವಿದ್ಯಾರ್ಥಿಗಳಿಗೆ ನ್ಯಾಯಮೂರ್ತಿಗಳು ಕೊಟ್ಟ ಮಾರ್ಮಿಕ ಉಪದೇಶ:

"It is hardly necessary for me to say that in the conduct of the case there should be nothing dubious. There should be no cunning pleadings,

no scandalous statements in pleading or affidavits and there should be no imputation on Judges of lower court where you have to draft grants of appeal. You should not try to impress on your client that you have prepared a written statement on an appeal petition of twenty pages. You may thus dupe an ignorant client in this way but you will bore the Judge and lose his respect for you."
(ಖಟ್ಲೆ ನಡಸುವಲ್ಲಿ ಯಾವುದೇ ಬಗೆಯ ಸಂದಿಗ್ಧತೆ ಇರಕೂಡ ದೆಂಬುದನ್ನು ಹೇಳುವ ಕಾರಣವಿಲ್ಲ. ಮೋಸತನದ ಮಷ್ಯಸ್ಥಿಕೆ. ಚಾಡಿ ಛಿದ್ರಗಳುಳ್ಳ ಹೇಳಿಕೆಗಳು. ಕೆಳಕೋರ್ಟಿನ ನ್ಯಾಯಾಧೀಶರ ಬಗ್ಗೆ ಇಲ್ಲದ ಆರೋಪ, ಇವು ಅಪೀಲಿನಲ್ಲಿ ಬರತಕ್ಕದ್ದಲ್ಲ. ಇಪ್ಪತ್ತು ಪುಟದ ಅಪೀಲಿನ ಅರ್ಜಿ ತಯಾರು ಮಾಡಿದ್ದೇನೆಂದು ನಿಮ್ಮ ಪಕ್ಷಗಾರನಿಂದ ಶಹಬಾಶಗಿರಿ ಪಡೆದುಕೊಳ್ಳುವ ಪ್ರಯತ್ನ ಬೇಡ. ಈ ಬಗೆಯಿಂದ ಅಜ್ಞಾನಿ ಪಕ್ಷಗಾರನ ಮೇಲೆ ನೀವು ಛಾಪು ಹಾಕಬಹುದು. ಆದರೆ ನ್ಯಾಯಾಧೀಶರಿಗೆ ತಲೆ ಬೇನೆ ಹಿಡಿಸಿ ನಿಮ್ಮ ಬಗ್ಗೆ ಅವರಲ್ಲಿರುವ ಗೌರವ ಸಹಾನುಭೂತಿಗಳನ್ನು ಕಳೆದುಕೊಳ್ಳುವಿರಿ.)

ತರುಣ ವಕೀಲರನ್ನು ಕುರಿತು ನ್ಯಾಯಮೂರ್ತಿಗಳು ಹೇಳಿದ ಉಪದೇಶದ ಮಾತುಗಳು ಅತ್ಯಂತ ಮಾರ್ಮಿಕವಾಗಿವೆ.

"ಪಕ್ಷಗಾರನು ಎಂತಹದೇ ಖಟ್ಲೆ ತಂದರೂ ಅದನ್ನು ಗೆದ್ದೇ ತೀರುವೆನೆಂಬ ಸುಳ್ಳು ಭರವಸೆಯನ್ನು ಕೊಡಬೇಡಿರಿ. ಸುಳ್ಳು ಭರವಸೆ ಕೊಡದಿದ್ದರೆ ಪಕ್ಷಗಾರರು ಬರಲಿಕ್ಕಿಲ್ಲ. ಆದರೆ ನಿಮ್ಮ ವಚನದ ಮಹತ್ವವು ಇಂದಿಲ್ಲ ನಾಳೆ ನಿಮ್ಮನ್ನು ಎತ್ತಿ ಹಿಡಿಯುವುದು.

"ಪಕ್ಷಗಾರನನ್ನು ಹುಡುಕುತ್ತ ವಕೀಲನು ಹೋಗಬಾರದು. ವಕೀಲನಿದ್ದೆಡೆಗೆ ಪಕ್ಷಗಾರನು ಬರಬೇಕು. ಪಕ್ಷಗಾರನನ್ನು ಆಕರ್ಷಿ ಸುವುದಕ್ಕಾಗಿ ಇಲ್ಲದ ಜಾಹೀರಾತು, ಇನ್ನೊಬ್ಬರ ಅವಹೇಳನೆ ಮಾಡ ಬೇಡಿರಿ.

"ಉಭಯ ಪಕ್ಷಗಳ ಮಧ್ಯದಲ್ಲಿ ಸತ್ಯವನ್ನು ಶೋಧಿಸುವ ರೀತಿ ಯೆಂದರೆ (ಸರ್. ಸಿ. ಎಸ್. ರಾಮಸ್ವಾಮಿಯವರ ಶಬ್ದಗಳಲ್ಲಿ) ಉಭಯ ಪಕ್ಷಗಳ ವತಿಯಿಂದ ಹೇಳುವ ವಕೀಲರ ಎಲ್ಲ ಸಾಧಕ ವಿಷಯಗಳನ್ನು ತಿಳಿದುಕೊಳ್ಳಬೇಕು. ವಕೀಲನು ತನ್ನ ಪಕ್ಷಗಾರರ ಬಗ್ಗೆ ಸಾಧ್ಯವಾದಷ್ಟು ಸಾಧಕ ರೀತಿಯಲ್ಲಿ ವಸ್ತುಸ್ಥಿತಿಗಳನ್ನಿಡಬೇಕು. ನ್ಯಾಯಾಧೀಶನು ಉಭಯ ಪಕ್ಷಗಳ ಹೇಳಿಕೆಗಳ ಹೊಳವುಗಳಿಂದ ಸತ್ಯವನ್ನು ಶೋಧಿಸಿ ತೆಗೆಯಬೇಕು. ಎಷ್ಟೋ ಸಲ ನಾನು ಖಟ್ಲೆ ಕಾಗದಗಳನ್ನು ಓದಿಕೊಂಡು ಮಾಡಿಕೊಂಡಿದ್ದ ಅಭಿಪ್ರಾಯವನ್ನು ವಕೀಲರ ವಾದಗಳನ್ನು ಕೇಳಿದ ಮೇಲೆ ಬದಲಿಸಬೇಕಾಯಿತು. ಆಮೇಲೆ ನನ್ನೊಳಗೆ ನಾನೇ ಅಂದುಕೊಂಡೆ. 'ಈ ಪಕ್ಷದ ವಕೀಲರು ಈ ಸಂಗತಿಯನ್ನು ನನ್ನ ಮುಂದೆ ಇಡದಿದ್ದರೆ ನಾನೆಂತಹ ಅಪರಾಧ ಮಾಡುತ್ತಿದ್ದೆನಲ್ಲ' – ಎಂದೆ.

ವಕೀಲಿ ವ್ಯವಸಾಯವೂ ಒಂದು ಸದ್ವ್ಯವಸಾಯ. ಸಮಾಜದಲ್ಲಿ ವಕೀಲರಿಗೂ ಒಂದು ಮರ್ಯಾದೆಯ ಸ್ಥಾನವಿದೆ. ವಕೀಲನೆಂದರೆ– ವಚನಭ್ರಷ್ಟ, ಕ್ರಿಯಾಭ್ರಷ್ಟ – ಎಂದು ಮೊದಲಾಗಿ ಅರ್ಥಮಾಡುವುದು ಸರಿಯಾದುದಲ್ಲ. ವಕೀಲನಲ್ಲಿಯೂ ಪ್ರಾಮಾಣಿಕತೆಯೆಂಬುದಿರು ತ್ತದೆ. ವಕೀಲನು ಸತ್ಯ– ನ್ಯಾಯಗಳ ವಕೀಲ, ಹಣಕಾಸಿನ ವಕೀಲ ನಲ್ಲ, ಎಂಬ ನ್ಯಾಯಮೂರ್ತಿಗಳ ನಿಶ್ಚಿತ ತತ್ವರಹಸ್ಯಗಳು ಅವರ ರಕ್ತದಾಳದಲ್ಲಿಳಿದಿವೆ; ಅವರ ಆಚಾರದಲ್ಲಿ ಒಡಮೂಡಿವೆ. ಈ ಸದಾಚಾರ ಸಂಪನ್ನತೆಯಿಂದಲೇ ಅವರು ಇಂದಿನ ಮಹಾವ್ಯಕ್ತಿಗಳಲ್ಲೊ ಬ್ಬರಾಗಿದ್ದಾರೆ.

ನ್ಯಾಯಮೂರ್ತಿಗಳು ಇಲ್ಲಿಯ ವರೆಗೆ ಅನೇಕಾನೇಕ ಸಂಘ ಸಂಸ್ಥೆಗಳಲ್ಲಿ, ಇತರ ಸಾಮಾಜಿಕ ಸಭೆಗಳಲ್ಲಿ ವಿವಿಧ ವಿಷಯಗಳ ಬಗ್ಗೆ ಮಾತನಾಡಿದ್ದಾರೆ. ಸಮಾಜ ರಚನೆ, ವರ್ಣಾಶ್ರಮ ಧರ್ಮ ಗಳು, ವ್ಯವಹಾರ ಧರ್ಮಶಾಸ್ತ್ರ, ಸಾಮಾಜಿಕ ಧರ್ಮಶಾಸ್ತ್ರ, ಸನಾತನ ಧರ್ಮಶಾಸ್ತ್ರ, ನಮ್ಮ ಶಿಕ್ಷಣದ ಸ್ವರೂಪ, ಅನಾಥ ಸಮಾಜ ಮೊದ ಲಾದ ಸಾಮಾಜಿಕ ವಿಷಯಗಳ ಬಗ್ಗೆ ನ್ಯಾಯಮೂರ್ತಿಗಳ ವಿಚಾರ

ಗಳು ಅನೇಕ ಕಡೆಗಳಲ್ಲಿ ಅವರು ಮಾಡಿದ ಉಪನ್ಯಾಸಗಳಲ್ಲಿ ಪ್ರತಿ
ಬಿಂಬಿತವಾಗಿವೆ.

ನ್ಯಾಯಮೂರ್ತಿಗಳು ಆಡಿದ ಒಂದು ಮಾತು ಅವರ ಅನುಭವ
ಸಾಗರದ ಆಳದಿಂದ ಎದ್ದುಬಂದ ಆಣೆಮುತ್ತಿನಂತಿರುತ್ತದೆ. ಅದರ
ಪ್ರಾಮಾಣಿಕತೆಯ ಬಗ್ಗೆ ಯಾರೂ ಪ್ರಶ್ನೆಯೆತ್ತಲಾರರು. ಅದನ್ನು
ಸಂಪೂರ್ಣವಾಗಿ ಅನುಭವಿಸಿ, ತಮ್ಮ ಪ್ರತ್ಯಯಕ್ಕೆ ಬಂದ ಮೇಲೆ ಅವರು
ಅದಕ್ಕೆ ಪ್ರಕಟನೆ ಕೊಡುತ್ತಾರೆ. ಕೇವಲ ನಾಲ್ಕಾರು ಹೊತ್ತಿಗೆಗಳನ್ನು
ಹುಡುಕಿ ಕೊಟೇಶನ್ ಗುರುತುಹಾಕಿ ಪಾಂಡಿತ್ಯ ಮೆರೆಸುವ ಪದ್ಧತಿ
ಇವರದಲ್ಲ. ಪುಣೆಯ ಅನಾಥ ಹಿಂದೂ ಮಹಿಳಾಶ್ರಮದ ವಾರ್ಷಿ
ಕೋತ್ಸವದಲ್ಲಿ ಒಮ್ಮೆ ಹೀಗೆ ಮಾತನಾಡಿದರು:

"ಅವಯವ ವಿಹೀನರಾದ ಜನರ ಬಗ್ಗೆ ಸಹಾನುಭೂತಿ ತೋರುವ
ಸಂಘಗಳಿವೆ; ಸಮಾಜವಿದೆ. ಆದಕ್ಕೂ ಹೆಚ್ಚಿನ ವಿಹೀನತೆಯಿಂದ
ಬಳಲುವ ಅನಾಥ ಬಾಲಿಕಾ ವರ್ಗವೊಂದಿದೆ. ಯಾವ ಅಂಗ
ವಿಹೀನತೆಯೂ ಅವರಿಗಿಲ್ಲ. ಸಮಾಜ ಶಾಪವೊಂದೆ ಅವರ ವ್ಯಂಗ
ವಾಗಿದೆ. ಕೌಮಾರ್ಯದಲ್ಲಿ ಹುಟ್ಟಿದ ಮಕ್ಕಳು, ಮದುವೆಯಾಗಿಲ್ಲ
ವೆಂಬ ಭೀತಿಗೆ ಎಸೆಯಲ್ಪಡುತ್ತವೆ. ತರುಣಿಯರಾದ ವಿಧವೆಯರು
ಯಾರೂ ದಿಕ್ಕಿಲ್ಲದವರಾಗಿ ಬೀದಿಗೆಳೆಯಲ್ಪಡುತ್ತಾರೆ. ಬಾಲಕ
ಗುನ್ಹೆಗಾರರು (ಕ್ರಿಮಿನಲ್ಸ್) ನಿಷ್ಪಾಪದಿಂದ ಗುನ್ಹೆಗಾರರ ಗುಂಪಿನಲ್ಲಿ
ಸಿಲುಕಿಸಲ್ಪಡುತ್ತಾರೆ. ಇಂಥವರನ್ನೆಲ್ಲ ಕಾಪಾಡುವ ಹೊಣೆಯನ್ನು
ಹೊತ್ತುಕೊಂಡು ಅನಾಥ ಹಿಂದೂ ಮಹಿಳಾಶ್ರಮವು ಮುಂದೆಬಂದಿದೆ."

ಒಂದು ಚಿಕ್ಕ ಸಂಗತಿಯನ್ನು ಇದೇ ಸಂದರ್ಭದಲ್ಲಿ ವಿವರಿಸಿದರು.
"ಒಬ್ಬ ಹಿಂದೂ ತರುಣಿ ಅಮೇರಿಕೆಯಲ್ಲಿ ಹುಟ್ಟಿದಳು. ಅಲ್ಲಿ ಅವಳ
ತಂದೆ ತಾಯಿ ಅಡುಗೆಮಾಡುತ್ತಿದ್ದರು. ಅಲ್ಲಿಯೇ ಅವರು ಸತ್ತು
ಹೋದರು. ಒಬ್ಬ ಮಿತ್ರನೆಂಬವನು ಆಕೆಯನ್ನು ಹಿಂದುಸ್ತಾನಕ್ಕೆ
ಕರೆತಂದ. ಆಕೆ ಅನಾಥಳಾಗಿದ್ದಳು. ಒಳ್ಳೇ ಉಚ್ಚ ಸಮಾಜದ
ಕುಲೀನ ತರುಣಿಯೆಂದು ಕನ್ಯಾಶುಲ್ಕ ತೆಗೆದುಕೊಂಡು ಆಕೆಯನ್ನು
ಮಾರಿದ.

ಕೊಂಡುಕೊಂಡವನಿಗೆ ಆಮೇಲೆ ತಿಳಿದುಬಂತು, ಈಕೆ ಅಡಿಗೆ ಯುವನಿಗೆ ಒಬ್ಬ ಪರದೇಶದ ಹೆಂಗಸಿನಿಂದ ಹುಟ್ಟಿದವಳೆಂದು. ಆತ ಆಕೆಯನ್ನು ಹೊರಗೆ ಹಾಕಿದ. ಈ ಖಟ್ಲೆ ನನ್ನ ಕಡೆಗೆ ಬಂದಾಗ ಆಕೆ ಒಬ್ಬ ಪೋಲೀಸನ ಆಶ್ರಯದಲ್ಲಿದ್ದಳು. ನಾನು ಆವಳಿಗೆ ಇದೇ ಸೇವಾಸದನದಲ್ಲಿ ಪ್ರವೇಶಕೊಡಿಸಿದೆ. ಆವಳ ಅನಾಥದೆಶೆ ನೆನೆದು ನನ್ನ ಕರುಳು ಹಿಂಡಿದಂತಾಯಿತು. ಎಂಥ ಸಾಮಾಜಿಕ ಶಾಪ ಆವಳಿಗೆ!"

x x x x

ನ್ಯಾಯಮೂರ್ತಿಗಳು ಧಾರ್ಮಿಕರು. ದೇವರಲ್ಲಿ ವಿಶ್ವಾಸ ವುಳ್ಳವರು. ಆದರೆ ಸನಾತನದ ಹೆಸರಿನಲ್ಲಿ ನಡೆಯುವ ಸಾಮಾಜಿಕ ಅನ್ಯಾಯವನ್ನು ಅವರ ನ್ಯಾಯದೃಷ್ಟಿ ಸಹಿಸದು. ನ್ಯಾಯಮೂರ್ತಿ ಗಳಿಗೆ ಧರ್ಮದ ಹೆಸರಿನಲ್ಲಿ ನಡೆಯುವ ಧಾರ್ಮಿಕ ಅನ್ಯಾಯ, ಸತ್ಯದ ಹೆಸರಿನಲ್ಲಿ ನಡೆಯುವ ಸಮಾಜದ ಸುಳ್ಳು ನಾಟಕ, ಆಗುವುದಿಲ್ಲ. ಇಂದು ನಮಗೆ ದೇವರು ಬೇಕು; ಧರ್ಮ ಬೇಕು; ಸತ್ಯ ಬೇಕು. ನಮ್ಮ ಪ್ರಾಚೀನ ಋಷಿಗಳು, ದ್ರಷ್ಟಾರರು ಕಂಡು ನಮಗೆ ಕೊಟ್ಟ ಬೆಳಕು ನಮ್ಮ ಕಣ್ಣು ತೆರೆಯಲಿ. ಆದರೆ ಅವರು ಕೊಟ್ಟ ಬೆಳಕನ್ನೇ ಮರೆಮಾಡಿ ಸುಳ್ಳಿನ ಮೋಡಗಳ ಮರೆಯಲ್ಲಿ ಗುಡುಗಾಡುವುದು ಬೇಡ–ಎಂಬ ಮಾತು ನ್ಯಾಯಮೂರ್ತಿಗಳದು.

ನ್ಯಾಯಮೂರ್ತಿಗಳ ಮನೆತನ ದೊಡ್ಡದು. ಸಿರಿ ಸರಸತಿಯ ರಿಬ್ಬರೂ ಕೈಕುಲುಕಿಸಿಕೊಂಡು ಲೋಕೂರರ ಮನೆಯ ಪಡಸಾಲೆ ಯಲ್ಲಿ ಪುಗಡಿಯಾಡಿದ್ದಾರೆ. ಸಿರಿಯನ್ನು ನೋಡಿ ಸರಸತಿ ಒಲಿದು ಬಂದಿದ್ದಾಳೆ. ಸರಸತಿಯ ಗೆಲುವನ್ನು ನೋಡಿ ಲಕುಮಿ ಮನಸೋತು ಬಂದಿದ್ದಾಳೆ. ಅಂತೆಯೆ ನ್ಯಾಯಮೂರ್ತಿಗಳು ಪ್ರಕೃತ್ಯಮಿತ್ರರಾದ ಈ ದ್ವಂದ್ವವ್ಯಕ್ತಿಗಳನ್ನು ವಶಮಾಡಿಕೊಂಡ ಸಿಂಹಪುರುಷರು.

ನಾರಾಯಣರಾಯರಲ್ಲಿ ವಂಶದಿಂದ ಇಳಿದು ಬಂದ ಪ್ರತಿಭೆ ಇದೆ; ಬುದ್ಧಿಶಕ್ತಿ ಇದೆ. ತಂದೆಯ ಬೆಳಕಿನ ಒಂದು ಕಣ್ಣು ನಾರಾಯಣ ರಾಯರು. ಇನ್ನೊಂದು ಕಣ್ಣು ಸ್ವಾಮಿರಾಯರು. ಇವರು ನ್ಯಾಯ

ದಲ್ಲಿ ಬೆಳಕು ಕಂಡರು. ಅವರು ತಂತ್ರವಿದ್ಯೆಯಲ್ಲಿ ಪ್ರಸಿದ್ಧಿಪಡೆದರು
ಬಿ. ಎಸ್‌ಸಿ. ಆಗಿ ಅಮೇರಿಕೆಗೆ ಹೋಗಿ ಬಿ. ಟಿ. ಸಿ. ಪದವಿ ಸಂಪಾದಿಸಿ
ದರು. ಹೆಣಿಗೆ ಕೈಗಾರಿಕೆಯ ಮೇಲೆ ಇಂದು ಲೋಕೂರ ಸ್ವಾಮಿ
ರಾಯರು ಕನ್ನಡಕ್ಕೊಬ್ಬರೇ ಕುಶಲ ಕಲಾವಿದರು.

ಶ್ರೀಮತಿ ಸರೋಜಾ ಲೋಕೂರ ಇವರು ಸ್ವಾಮಿರಾಯರ ಧರ್ಮ
ಪತ್ನಿ. ಶ್ರೀಮತಿ ಸರೋಜಾ ಇವರು ಒಳ್ಳೇ ರಸಿಕರು; ಗಾಯತ್ರಿಗಳು
ಹೊಸಗನ್ನಡ ಕವಿತೆಗಳನ್ನು ಇಂಪಾಗಿ ಹಾಡಬಲ್ಲರು.

ಎರಡು ಒಳ್ಳೇ ಕಲಮು ಕೂಡಿ ಮೂರನೆಯ ವೃಕ್ಷ ಅರಳುತ್ತದೆ.
ಇದರ ಫಲವೆ ನಾರಾಯಣರಾಯರ, ಸ್ವಾಮಿರಾಯರ ಸಂತತಿ.

ಲೋಕೂರ ನಾರಾಯಣರಾಯರು ಚರಿತ್ರ ಪುರುಷರಾಗಿದ್ದಾರೆ.
ಕನ್ನಡ ಕುಲಕ್ಕೆ ನಾರಾಯಣರಾಯರು ಸಲ್ಲಿಸಿದ ಕಾಣಿಕೆಯೇನು?
ಎಂದು ಕನ್ನಡಿಗರಾರಾದರೂ ಕೇಳಬಹುದು.

ಲೋಕೂರ ನಾರಾಯಣರಾಯರು ಇಂದು ಕತೆ, ಕವಿತೆ ಬರೆದು
ಕನ್ನಡ ಸಾಹಿತಿಯೆನಿಸಿಕೊಂಡಿರಲಿಕ್ಕಿಲ್ಲ. ಲೋಕೂರ ನಾರಾಯಣ
ರಾಯರು ರಾಜಕೀಯ ಚಳುವಳಿಯಲ್ಲಿ ಭಾಗವಹಿಸಿದ ದೇಶಭಕ್ತರಾಗಿ
ರಲಿಕ್ಕಿಲ್ಲ. ಲೋಕೂರ ನಾರಾಯಣರಾಯರು ನ್ಯಾಯಮೂರ್ತಿಗಳಾಗಿ
ಲೋಕಕ್ಕೇ ತಕ್ಕಡಿಯಲ್ಲಿ ನ್ಯಾಯವನ್ನು ತೂಗಿ ತೂಗಿ ಕೊಟ್ಟ ನ್ಯಾಯ
ದಂಗಡಿಯ ವ್ಯಾಪಾರಿಗಳಾಗಿದ್ದಾರೆ. ಕನ್ನಡ ನಾಡಿಗೂ ಅಷ್ಟೇ ನ್ಯಾಯ
ದಾನಮಾಡಿರಬಹುದು. ಮಹಾರಾಷ್ಟ್ರಕ್ಕೂ ಅಷ್ಟೇ ನ್ಯಾಯ ದಾನ
ಮಾಡಿರಬಹುದು.,

ಇಂದು ಕನ್ನಡ ನಾಡು ಕೇವಲ ಸಾಹಿತ್ಯದಲ್ಲಷ್ಟೇ ಅಲ್ಲ, ಸರ್ವ
ತೋಮುಖವಾಗಿ ಕಣ್ಣು ತೆರೆಯಬೇಕಾಗಿದೆ. ಮುನ್ನಡೆಯುವ,
ಮುಂದೋಡುವ ಸರಿಸಮಾನ ಪ್ರಾಂತಗಳ ಪ್ರಗತಿಗೆ ಜೊತೆಯಾಗಿ ಹೆಜ್ಜೆ
ಯಿಡಬೇಕಾಗಿದೆ. ಇಂದು ನಮ್ಮ ನಾಡನ್ನು ನಾವು ಕಟ್ಟಬೇಕಾಗಿದೆ.
ಹಾಡು ಕಟ್ಟುವವರಿರಬಹುದು. ಇಂದು ನಮಗೆ ನಾಡು ಕಟ್ಟುವವರು
ಬೇಕಾಗಿದ್ದಾರೆ. ನಮ್ಮ ನಾಡಿನ ಸುಂದರವಾದ ಗುಡಿಯನ್ನು ಕಟ್ಟಿ,
ಅದರ ಗರ್ಭಗುಡಿಯಲ್ಲಿ ಜಯ ಕನ್ನಡ ದೇವಿಯ ಮೂರ್ತಿ ಸ್ಥಾಪಿಸಿ,

ಆದರ ಭವ್ಯಮಂದಿರದಲ್ಲಿ ಶಿಲ್ಪಕಲೆಯ ಕಲಾಕುಸುರಿಯನ್ನೆರಚಿ, ಎರಡು ಕೋಟಿ ಕನ್ನಡಿಗರ ಕನ್ನಡ ಭಜನೆ, ಕನ್ನಡ ಪೂಜೆಯನ್ನು ಮಾಡಿಸುವ ಪೂಜಾರಿಗಳೊಬ್ಬರು ನಮಗೆ ಬೇಕಾಗಿದ್ದಾರೆ.

ಕನ್ನಡಕುಲ ಇಷ್ಟು ದಿವಸಗಳವರೆಗೆ ನ್ಯಾಯಮೂರ್ತಿಗಳ ಸಮೀಪ ಪರಿಚಯಕ್ಕೆ ಬಂದಿಲ್ಲ. ಲೋಕೂರ ಕುಟುಂಬ ಪರಿಚಯ ಕನ್ನಡ ಕುಲಕ್ಕೆ ಆಗಿಲ್ಲ. ಪರಿಸ್ಥಿತಿಯ ಮೂಲಕವೋ, ನಮ್ಮ ದುರ್ದೈವದ ಮೂಲಕವೋ ಬಹುಕಾಲ ನ್ಯಾಯಮೂರ್ತಿಗಳು ಕನ್ನಡ ಗಂಡು ಮೆಟ್ಟನ್ನು ಬಿಟ್ಟು ದೂರ, ದೂರದಲ್ಲಿ ಕನ್ನಡ ವಲಯದಿಂದ ದೂರವಾಗಿಯೇ ಇದ್ದರು. ಇಂದು ಅವರು ನಮಗೆ ದೊರಕಿದ್ದಾರೆ. ಕನ್ನಡ ಪ್ರದೇಶಕ್ಕೆ ಬಂದಿದ್ದಾರೆ. ಕೊಲ್ಹಾಪುರದ ಮಹಾಲಕ್ಷ್ಮಿಯ ಆಶ್ರಯಕ್ಕೊಳಗಾಗಿದ್ದಾರೆ.

ಇನ್ನೂ ನಮ್ಮ ನಾಡಿನ ಏಕೀಕರಣವಾಗಬೇಕಾಗಿದೆ. ನಮ್ಮ ವಿಶ್ವವಿದ್ಯಾನಿಲಯವನ್ನು ತಳಹಾಕಿ ಕಟ್ಟಬೇಕಾಗಿದೆ. ನಮ್ಮ ಪ್ರಾಂತದ ರಚನೆ ಆಗಬೇಕಾಗಿದೆ. ನಮ್ಮ ಸಮಾಜ ರಚನೆ ಆಗಬೇಕಾಗಿದೆ. ಏಕೀಕರಣಕ್ಕೆ ಮೊದಲು, ಏಕೀಭಾವ ಬೆಳೆಯಬೇಕಾಗಿದೆ. ಕನ್ನಡ ಜನ, ಕನ್ನಡ ಮನ, ಮೊದಲು ಒಂದಾಗಬೇಕಾಗಿದೆ. ನಾಡವರ ಏಕೀಕರಣವಾದ ಮೇಲೆ ನಾಡಿನ ಏಕೀಕರಣ.

ಅಂತೇ ನಾವಿಂದು ನಾಡಗುಡಿಯನ್ನು ಕಟ್ಟಬೇಕಾಗಿದೆ. ಕೊಲ್ಹಾಪುರದ ಮಹಾಲಕ್ಷ್ಮಿ ಕನ್ನಡಿಗರೆಲ್ಲರ ತಾಯಿ. ಮಹಾಲಕ್ಷ್ಮಿಯ ಮಹಾದೇವಾಲಯದ ಬಳಿಯಲ್ಲಿಯೇ ಕನ್ನಡ ನಾಡಗುಡಿ ಕಟ್ಟೋಣ. ಜಯ ಕನ್ನಡ ದೇವಿಯನ್ನು ಸ್ಥಾಪಿಸೋಣ. ಕನ್ನಡ ಗಾಯತ್ರಿಮಂತ್ರ ಜಪಿಸೋಣ. ಕನ್ನಡ ಬಾವುಟವನ್ನು ನಮ್ಮ ಗುಡಿಯ ಚಿನ್ನದ ಕಳಸದ ಮೇಲೆ ಹಾರಿಸೋಣ. ನಮ್ಮ ನಾಳಿನ ನಾಡಗುಡಿಯ ಪೂಜಾರಿಗಳಲ್ಲಿ ನ್ಯಾಯಮೂರ್ತಿ ನಾರಾಯಣರಾಯರೊಬ್ಬರೆಂದರೆ ಅನ್ಯಾಯವೇನೂ ಅಲ್ಲವಷ್ಟೆ?

x x x x

ಲೋಕೂರ ನಾರಾಯಣರಾಯರ ಷಷ್ಟ್ಯಬ್ಧಿಯ ಶಾಂತಿ ಸಮಾ
ರಂಭದಲ್ಲಿ ಈ ಅಲ್ಪ ಕಾಣಿಕೆಯನ್ನು ಅವರಿಗೆ ಸಲ್ಲಿಸುವ ಸುಯೋಗ
ನನಗೆ ಒದಗಿ ಬಂದುದು ನನಗೊಂದು ಅಭಿಮಾನ.

ಲೋಕೂರ ನಾರಾಯಣರಾಯರು ಇಂದು ಅರುವತ್ತೊಂದನೆಯ
ವರುಷದ ಹೊಸ್ತಿಲದಲ್ಲಿ ಕಾಲನ್ನಿಟ್ಟಿದ್ದಾರೆ. ನಾಳಿನ ಸುಖ, ಸಂಪದಾ
ರೋಗ್ಯ ಭಾಗ್ಯದ ಬಾಗಿಲ ನಾರಾಯಣರಾಯರಿಗಾಗಿ ಇಂದು ತೆರೆಯಲಿ.
ಅರುವತ್ತನೆಯ ವರುಷದ ಹಬ್ಬ ರಾಯರ ಜೀವನದಲ್ಲಿಯ ವಜ್ರ
ಮಹೋತ್ಸವ. ರಾಯರು ವಜ್ರಕಾಯರಾಗಲಿ. ಕನ್ನಡ ನಾಡಿಗೆ
ವಜ್ರ ಕಾಣಿಕೆಯನ್ನು ಸಲ್ಲಿಸಲಿ.

ರಾಯರ ಅರುವತ್ತನೆಯ ವಯಸ್ಸಿನ ವರೆಗಿನ ಜೀವನ ಪರಿಚಯ
ವನ್ನು ಈ ಅರುವತ್ತು ಪುಟಗಳಲ್ಲಿ ಮುಗಿಸುತ್ತಿದ್ದೇನೆ. ರಾಯರ
ಜೀವನದ ವಿವಿಧ ಮುಖಗಳ ಪರಿಚಯವನ್ನು ಮಾತ್ರ ನಾನಿಲ್ಲಿ
ಮಾಡಲು ಹವಣಿಸಿದ್ದೇನೆ. ಇನ್ನೂ ಎಷ್ಟೋ ಮಹತ್ವದ ವಿಷಯಗಳು
ಉಲ್ಲೇಖವಾಗದೆ ಉಳಿದಿವೆಯೆಂಬುದರ ಅರಿವು ನನಗಿದೆ. ನನ್ನ ಸಹ
ಲೇಖಕರು ನಾನು ಉಳಿಸಿರುವ ಕಾರ್ಯವನ್ನು ಪೂರೈಸಲು ಕೈಕೊಂಡಿ
ದ್ದಾರೆ. ಓದುಗರಿಗೆ ಒಟ್ಟಿನ ಸರಿಯಾದ ಕಲ್ಪನೆ ಆದೀತೆಂಬ ಭರವಸೆ.

ನನ್ನನ್ನು ವಿಶ್ವಾಸದಿಂದ ಕಂಡು ರಾಯರು ತಮ್ಮ ಜೀವನ
ಪರಿಚಯ ಮಾಡಿಕೊಡುವದಕ್ಕೆ ನನಗೆ ಅನುಮತಿ ಇತ್ತರು. ಅವರ
ವ್ಯಕ್ತಿತ್ವ ನನ್ನ ಲೇಖನಿಯಿಂದ ಘನತೆಗೇರಲಾರದು. ಆದರೆ ನನ್ನ
ಲೇಖನದಿಂದ ಅವರ ವ್ಯಕ್ತಿತ್ವಕ್ಕೆ ಯಾವ ಕಲಂಕವೂ ಬಾರದಿದ್ದರೆ ಅಷ್ಟೆ
ನನಗೊಂದು ಸಮಾಧಾನ.

೧೬-೩-೪೭ನೆಯ ಸನ್ಮಾನ ಸಮಾರಂಭದಲ್ಲಿ ನಾನು ಹೇಳಿದುದು
ನೆನಪಿದೆ:—

“ರಾಮಾಯಣದ ರಚನೆಯಿಂದ ರಾಮನು ಅವತಾರಿಪುರುಷನೆನಿ
ಸಿಕೊಳ್ಳಲಿಲ್ಲ. ಆತ ಮೊದಲೆ ಅವತಾರಿಯಾಗಿದ್ದ. ಆದರೆ ವಾಲ್ಮೀಕಿ
ಮಾತ್ರ ಆದಿಕವಿಯೆನಿಸಿಕೊಂಡ, ಮಹರ್ಷಿಯಾದ.”

× × × ×

## ನ್ಯಾಯಮೂರ್ತಿ

# ಲೋಕೂರ ನಾರಾಯಣರಾಯರು

## (ಇಮಾರತಿ ಕಂಡಂತೆ)

### ಮುಂಬಯಿ ಕರ್ನಾಟಕ ಸಂಘದ ಪರಿಚಯ

ಅದು ಕ್ರಿಸ್ತಶಕ ೧೯೩೭ನೇ ವರುಷ. ಆಗ ಸಂಘವು ತನ್ನ ಐದನೆಯ ವರುಷದಲ್ಲಿ ಅಡಿ ಇಟ್ಟಿತ್ತು. ಮೊದಮೊದಲು ಸಂಘದ ಚಟುವಟಿಕೆಗಳು ಉತ್ಸಾಹದಿಂದ ನಡೆಯುತ್ತಿದ್ದವು. ಬರಬರುತ್ತ ಕಾರ್ಯಕರ್ತರ ಸಂಖ್ಯೆಯೂ ಕರಗುತ್ತ ಬಂದಿತ್ತು. ಇದ್ದ ಅಲ್ಪಸ್ವಲ್ಪ ಕೆಲಸಗಾರರಲ್ಲಿ ಕೆಲ ಕಾರಣಗಳದೆಸೆಯಿಂದ ಅಷ್ಟೊಂದು ಆಸ್ಥೆ ಉಳಿದಿದ್ದಿಲ್ಲ; ಸದಸ್ಯರಿಂದ ದೊರೆಯಬೇಕಾದ ಸಹಕಾರ ದೊರೆಯುವುದಿಲ್ಲವೆಂದು ಕಾರ್ಯಕರ್ತರು ಗುಣುಗುಟ್ಟುತ್ತಿದ್ದರು. ಸಂಘದ ಕಾರ್ಯಗಳು ಮೊದಲಿನ ಹಾಗೆ ನಡೆಯುವುದಿಲ್ಲವೆಂದು ಸದಸ್ಯರ ದೂರು. ಅಂತೂ ಇಂತೂ ಕುಂತೀ ಮಕ್ಕಳಿಗೆ ರಾಜ್ಯವಿಲ್ಲವೆಂಬಂತೆ ಸಂಘಕ್ಕೆ ಕಾರ್ಯ

ಕರ್ತರ ಉತ್ಸಾಹ ಮತ್ತು ಸದಸ್ಯರ ಸಹಾನುಭೂತಿ, ಸಹಕಾರಗಳು ಲೋಪ ಹೊಂದಹತ್ತಿದವು ಭರದಿಂದ ನಡೆದ ಮನುಷ್ಯನು ಮುಗ್ಗರಿಸಿ ಬಿದ್ದು, ಅವನ ಗತಿಯು ಕುಂಠಿತವಾದಂತೆ ಸಂಘದ ಸ್ಥಿತಿಯಾಗಿತ್ತು. ಸಂಘವು ತನಗೊದಗಿದ ಈ ವಿಷಮ ಪರಿಸ್ಥಿತಿಯಿಂದ ತಲೆಯೆತ್ತಿ ನಿಲ್ಲಲು ಸಾಧ್ಯವೇ? ಎಂಬ ವಿಚಾರವು ಕೆಲವು ಕಾರ್ಯಕರ್ತರ ತಲೆಯಲ್ಲಿ ಸುಳಿದಾಡಿತು.

ಸಂಘದ ಸ್ಥಿತಿಗತಿಗಳು ಸುಧಾರಿಸುವದಕ್ಕೆ ಯಾವ ಉಪಾಯಗಳನ್ನು ಕೈಕೊಳ್ಳಬೇಕೆಂಬ ಬಗ್ಗೆ ಎಲ್ಲರೂ ತಲೆಕೆದರ ಹತ್ತಿದರು. ಅಷ್ಟರಲ್ಲಿ ಐದನೆಯ ವಾರ್ಷಿಕೋತ್ಸವ ಬಂದಿತು. ಈ ವಾರ್ಷಿಕೋತ್ಸವವನ್ನು ಒಳ್ಳೆ ಸಡಗರದಿಂದ ಆಚರಿಸಬೇಕೆಂದು ನಿರ್ಧಾರವಾಯಿತು. ವಾರ್ಷಿಕೋತ್ಸವದಲ್ಲಿ, ಪ್ರತಿಭಾವಂತ ಕನ್ನಡಿಗರನ್ನು ಆಮಂತ್ರಿಸಿ, ಸತ್ಕರಿಸಿ ಅವರಿಂದ ಹೊಸ ವಿಚಾರಗಳನ್ನು ಕೇಳಿಕೊಂಡು ಮುಂದಿನ ಕಾರ್ಯಕ್ಕೆ ಸ್ಫೂರ್ತಿಯನ್ನು ಪಡೆದುಕೊಳ್ಳುವ ಪರಿಪಾಠವನ್ನು ಪ್ರಾರಂಭದಿಂದಲೂ ಅನುಸರಿಸಲಾಗಿದೆ. ಅದರಂತೆ ಆ ವರುಷದ ವಾರ್ಷಿಕೋತ್ಸವಕ್ಕೆ ಪುಣೆಯಲ್ಲಿ ಜಿಲ್ಹಾ ನ್ಯಾಯಾಧೀಶರಾಗಿದ್ದ ಶ್ರೀಮಾನ್ ಲೋಕೂರ ನಾರಾಯಣರಾಯರನ್ನು ಕರೆಯಿಸಬೇಕೆಂದು ಗೊತ್ತಾಯಿತು. ಕೇಳಿದೊಡನೆಯೇ 'ನಿಮ್ಮ ಆಮಂತ್ರಣವನ್ನು ಸ್ವೀಕರಿಸಲು ನನಗೆ ತುಂಬ ಸಂತೋಷವಾಗುತ್ತಿದೆ' ಎಂದು ಉತ್ತರ ದೊರೆಯಿತು. ಅವರ ಈ ಉತ್ತರವು ಕಾರ್ಯಕರ್ತರಲ್ಲಿ ಹೊಸಹುರುಪನ್ನು ಹುಟ್ಟಿಸಿತು. ಸಿದ್ಧತೆಗಳು ಜೋರಾಗಿ ನಡೆದು, ಉತ್ಸವದ ಕಾರ್ಯಕ್ರಮಗಳು ಬೆಳಗಿನ ಅಲ್ಪೋಪಹಾರದಿಂದ ಮೊದಲ್ಗೊಂಡು ವಾರ್ಷಿಕ ಸಾಧಾರಣ ಸಭೆ, ಸವಿಾಚೀನ ಊಟ, ವಾರ್ಷಿಕೋತ್ಸವದ ಸಭೆ, ಗಾಯನ ನಾಟಕಗಳು ಸಂಜೆ ಎಂಟು ಗಂಟೆಯ ವರೆಗೆ ನಡೆದವು. ಶ್ರೀಮಾನ್ ಲೋಕೂರರವರ ಬರುವಿಕೆಯಿಂದ ಎಲ್ಲರಲ್ಲಿ ಉತ್ಸಾಹ ಉಕ್ಕೇರುತ್ತಿತ್ತು. ಅವರು ಕರ್ನಾಟಕ ಮತ್ತು ಕನ್ನಡದ ಸಂಬಂಧವಾಗಿ ತೋರಿಸಿದ ಕಳಕಳಿಯು ಎಲ್ಲರಲ್ಲಿ ಮನೆಮಾಡಿ ಸಂಘದ ಕಾರ್ಯಕಲಾಪಗಳು ಮತ್ತೆ ಸುಗಮವಾಗಿ ನಡೆಯುವಂತಾಯಿತು.

## ಪುಣೆಯಲ್ಲಿ ಜಿಲ್ಲಾ ನ್ಯಾಯಾಧೀಶ



ರಾಗಿದ್ದ ಲೋಕೂರ ನಾರಾಯಣರಾಯರನ್ನು ಕರೆಯಿಸಬೇಕೆಂದು ಗೊತ್ತಾಯಿತು

ಆ ದಿನ ಸಂಘದ ಕಾರ್ಯದ ವರದಿಯನ್ನು ಓದುವ ಕೆಲಸ ನನ್ನ ಪಾಲಿಗೆ ಬಂದಿತ್ತು. ಶ್ರೀಮಾನ್ ಲೋಕೂರವರು ಜಿಲ್ಹಾ ನ್ಯಾಯಾಧೀಶರ ಹುದ್ದೆಯಲ್ಲಿದ್ದವರು. ನಾನು ಒಬ್ಬ ಬಡ ಕಾರಕೂನ. ಅವರ ಬಳಿ ನಿಂತು ವರದಿಯನ್ನು ಓದಲು ನನಗೆ ಸಂಕೋಚವೆನಿಸಿತು. ಮತ್ತಾರಾದರೂ ಈ ಕೆಲಸವನ್ನು ಮಾಡಬೇಕೆಂದು ಸೂಚಿಸಿದೆ. ಕೊನೆಗೆ ಅದು ನನ್ನ ಕೊರಳಿಗೇ ಬಿದ್ದಿತು. ಅವರು ದೊಡ್ಡವರಾದರೂ ನಮ್ಮವರೇ ಅಲ್ಲವೇ ಎಂದುಕೊಂಡು ಎದೆಗಟ್ಟಿಮಾಡಿದೆ. ನಾನು ಕೈಯಲ್ಲಿ ವರದಿಯನ್ನು ತೆಗೆದುಕೊಂಡು ಹೋದಕೂಡಲೇ 'ಇವರು ಜೊತೆ ಕಾರ್ಯದರ್ಶಿಗಳು' ಎಂದು ಸಂಘದ ಅಧ್ಯಕ್ಷರು ರಾಯರಿಗೆ ಪರಿಚಯಮಾಡಿಕೊಟ್ಟರು. ಒಳ್ಳೇ ಆತ್ಮೀಯ ಭಾವನೆಯಿಂದ ತುಂಬಿದ ನಗೆಯೊಂದನ್ನು ಬೀರಿ, ರಾಯರು ನನ್ನನ್ನು ತಮ್ಮ ಬಳಿ ಕರೆದರು. ಅವರ ಪ್ರೇಮಳ ಸ್ವಭಾವವು ನನ್ನಲ್ಲಿಯ ಸಂಕೋಚ ಭಾವನೆಗಳನ್ನು ಕಿತ್ತೊಗೆಯಿತು. ವರದಿಯನ್ನು ಓದಿ ಮುಗಿಸಿದೆ. ರಾಯರು ಅಧ್ಯಕ್ಷ ಭಾಷಣದಲ್ಲಿ ವರದಿಯ ಬಗ್ಗೆ ಸಮಾಧಾನಕರ ಉದ್ಗಾರಗಳನ್ನು ತೆಗೆದರು. ಈ ಸುಪ್ರಸಂಗದಿಂದ ರಾಯರಿಗೆ ಸಂಘದ ಪ್ರಥಮ ಪರಿಚಯ ವಾಯಿತು. ಹಾಗೆಯೇ ಮೊದಲ ಸಲ ನನಗೂ ರಾಯರ ವೈಯಕ್ತಿಕ ಪರಿಚಯವಾಯಿತು.

## ಪುಣೆಯಲ್ಲಿ ಭೆಟ್ಟಿ

ಕನ್ನಡ ನಾಡಿನ ಹೊರಗೆ ವಾಸಿಸುವ ಕನ್ನಡಿಗರಲ್ಲಿ ಪರಸ್ಪರ ಪರಿಚಯವುಂಟಾಗಿ ಆವರವರ ಸ್ಥಾನಿಕ ಕನ್ನಡ ಸಮಸ್ಯೆಗಳ ವಿಚಾರ ವಿನಿಮಯವಾಗುವದಕ್ಕೆ ಅವಕಾಶ ಕಲ್ಪಿಸಿಕೊಡುವ ಉದ್ದೇಶದಿಂದ ಪುಣೆಯಲ್ಲಿಯ ಕೆಲ ಕನ್ನಡ ಕಾರ್ಯಕರ್ತರು 'ಹೊರನಾಡಿನ ಕನ್ನಡಿಗರ ಸಮ್ಮೇಲನ'ವನ್ನು ಕ್ರಿ. ಶ. ೧೯೪೧ರಲ್ಲಿ ಏರ್ಪಡಿಸಿದರು. ಈ ಸಮ್ಮೇಲನಕ್ಕೆ ಮುಂಬಯಿಂದ ಹೋದ ಪ್ರತಿನಿಧಿಗಳಲ್ಲಿ ನಾನೂ ಒಬ್ಬನಾಗಿದ್ದೆ. ಸಮ್ಮೇಲನದಲ್ಲಿ ಶ್ರೀಮಾನ್ ಲೋಕೂರ ನಾರಾಯಣರಾಯರನ್ನೂ ಕಾಣಬಹುದೆಂದು ಎಣಿಸಿದ್ದೆ. ಆದರೆ ಅವರು ಅಲ್ಲಿ ಬಂದಿರಲಿಲ್ಲ.

ಹೀಗಾಗಲು ಕಾರಣವೇನಿರಬಹುದು ಎಂದು ನನ್ನಲ್ಲಿ ಕುತೂಹಲ ವುಂಟಾಯಿತು. 'ಶ್ರೀಮಾನ್ ಲೋಕೂರ ನಾರಾಯಣರಾಯರಿಗೆ ಇಲ್ಲಿಂದ ಎರಡನೆ ಊರಿಗೆ ವರ್ಗವಾಗಿದೆಯೇ?' ಎಂದು ಅಲ್ಲಿಯ ಒಬ್ಬ ಕಾರ್ಯಕರ್ತರನ್ನು ಕೇಳಿದೆ. 'ಇಲ್ಲ ಇಲ್ಲಿಯೇ ಕೆಲಸ ಮಾಡು ತ್ತಿದ್ದಾರೆ. ಸಮ್ಮೇಲನಕ್ಕೆ ಯಾಕೆ ಬಂದಿಲ್ಲವೆಂಬುದು ನನಗೆ ಗೊತ್ತಿಲ್ಲ.' ಎಂದು ಉತ್ತರ ದೊರೆಯಿತು. ಇದು ಹೇಗೇ ಇರಲಿ ರಾಯರನ್ನು ಕಂಡು ಹೋಗಬೇಕೆಂದು ಗೊತ್ತು ಮಾಡಿಕೊಂಡೆ. ಅವರು ಕಚೇರಿ ಯಿಂದ ಬರುವ ಹೊತ್ತಿಗೆ ನೇರವಾಗಿ ಅವರ ನಿವಾಸಸ್ಥಾನಕ್ಕೆ ತೆರಳಿದೆ. ರಾಯರು ಆದೇ ಬಂದಿರುವರೆಂದು ತಿಳಿಯಿತು. ನಾನು ತಮ್ಮನ್ನು ಕಾಣಲು ಬರುವವನಿದ್ದೇನೆಂದು ತಿಳಿಸಿ ಅವರ ಒಪ್ಪಿಗೆ ಯನ್ನು ಮೊದಲೇ ಪಡಕೊಂಡಿರಲಿಲ್ಲ. ಹಾಗೆ ಮಾಡಲು ನನಗೆ ಸಾಕಷ್ಟು ವೇಳೆಯೂ ಇರಲಿಲ್ಲ. ನನ್ನ ಹೆಸರನ್ನು ಕಾಗದದ ಚೂರಿನಲ್ಲಿ ಬರೆದು ಕಳಿಸಿದೆ. ಐದು ನಿಮಿಷದಲ್ಲಿ ಒಳಗೆ ಬರಲು ಅಪ್ಪಣೆಯಾಯಿತು. 'ಏನು, ಕರ್ನಾಟಕ ಸಂಘವು ಸರಿಯಾಗಿ ನಡೆದಿದೆಯೇ?' ಎಂದು ಮಾತಿಗೆ ಮೊದಲು ಮಾಡಿದರು ರಾಯರು. ನಾನು ಮುಂಬಯಿ ಕರ್ನಾಟಕ ಸಂಘದ ಕೆಲಸಗಾರನೆಂದು ರಾಯರು ನೆನಪಿನಲ್ಲಿಟ್ಟದ್ದು ನೋಡಿ ನನಗೆ ಒಂದು ಬಗೆಯ ಹಿಗ್ಗು. 'ಚನ್ನಾಗಿ ನಡೆದಿದೆ' ಎಂದು ತಗ್ಗಿದ ದನಿಯಲ್ಲಿ ನುಡಿದೆ. 'ನೆಟ್ಟಗೆ ನಡೆದಿದೆ' ಎಂದು ಗಟ್ಟಿಯಾಗಿ ಹೇಳುವ ಗಟ್ಟಿತನ ಆಗ ಸಂಘದಲ್ಲಿ ಇದ್ದಿಲ್ಲ. 'ಸಮ್ಮೇಲನದಲ್ಲಿ ತಾವು ಕಾಣಲಿಲ್ಲ, ಕಾರಣ ತಮ್ಮನ್ನು ಕಂಡು ಹೋಗೋಣವೆಂದು ಇಲ್ಲಿ ಬಂದು ಬಿಟ್ಟೆ' ಎಂದೆ. 'ಹೌದು ನನಗೂ ಸಮ್ಮೇಲನಕ್ಕೆ ಬರಬೇಕೆಂದು ಬಹಳ ಇಚ್ಛೆ ಇತ್ತು. ಸಮ್ಮೇಲನದ ಕಾರ್ಯಕರ್ತರು ನನಗೆ ಈ ವಿಷಯ ಮೊದಲೇ ತಿಳಿಸಿದ್ದರು. ಆದರೆ ಆಗ ಸಮ್ಮೇಲನವು ನಡೆಯು ಬೇಕಾದ ದಿನಗಳು ಇನ್ನೂ ನಿಶ್ಚಿತವಾಗಿ ತಿಳಿದಿರಲಿಲ್ಲ. ಆ ದಿನಗಳು ಗೊತ್ತಾಗಿ ನನಗೆ ತಿಳಿಯುವ ಮೊದಲೇ ನಾನು ಕೋರ್ಟಿನ ಇನ್ಸಪೆಕ್ಶನ್ ಕೆಲಸಕ್ಕಾಗಿ ಪುಣೆಯ ಹೊರಗೆ ಹೋದೆ. ನಿನ್ನೆ ಬಂದ ಕೂಡಲೇ ನನ್ನ ಕೈಗೆ ಸಮ್ಮೇಲನದ ಆಮಂತ್ರಣ ದೊರೆಯಿತು. ಅಷ್ಟರಲ್ಲಿ

ಸಮ್ಮೇಲನವು ಮುಗಿದು ಹೋಗಿತ್ತು. ಉಜ್ವಲ ಕನ್ನಡಿಗರಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರನ್ನೂ ಹಾಗು ಅನೇಕ ಸ್ಥಳಗಳಿಂದ ಬಂದ ಕನ್ನಡಿಗರನ್ನೂ ಕಾಣುವ ಸುಸಂಧಿ ಕಳೆದುದಕ್ಕಾಗಿ ಹಳಹಳಿಸಿದೆ' ಎಂದು ಚಡಪಡಿಸಿದರು. 'ಪುಣೆಯಲ್ಲಿ ದೊಡ್ಡ ಹುದ್ದೆದಾರರಾದ ತಾವು ಸಮ್ಮೇಲನಕ್ಕೆ ಬಂದಿದ್ದರೆ, ಒಂದು ಬಗೆಯ ಶೋಭೆಯುಂಟಾಗುತ್ತಿತ್ತು.' ಎಂದು ಮತ್ತೆ ಅದೇ ಮಾತನ್ನೆತ್ತಿದೆ. "ಯಾವ ಕೆಲಸಕ್ಕಾದರೂ ಯೋಗಾಯೋಗ ಬೇಕಲ್ಲವೇ? ನಮ್ಮ ಕೈಯಲ್ಲೇನಿದೆ" ಎಂದು ತತ್ವಜ್ಞಾನದ ಉಪದೇಶ ರೂಪವಾದ ಉತ್ತರವಿತ್ತರು.

'ಇಲ್ಲಿಯ ಕರ್ನಾಟಕ ಸೋಶಿಯಲ್ ಕ್ಲಬ್ಬು ಬಹಳ ವರ್ಷಗಳಿಂದ ನಡೆದು ಬಂದ ಕನ್ನಡಿಗರ ಸಂಸ್ಥೆ. ಆದರೂ ಅದೇಕೋ ಹೇಗೆ ಬೆಳೆಯಬೇಕೋ ಹಾಗೆ ಬೆಳೆದಿಲ್ಲ. ತಾವು ಅದರಲ್ಲಿ ಕೊಂಚ ಮನಸ್ಸು ಹಾಕಿದರೆ ಎಷ್ಟೋ ಕೆಲಸವಾದೀತು' ಎಂದು ಮೆಲ್ಲಗೆ ಸೂಚಿಸಿದೆ.

'ಸಂಸ್ಥೆಗಳು ಏಳ್ಗೆ ಹೊಂದ ಬೇಕಾದರೆ ನುರಿತ ಕೆಲಸಗಾರರು ಬೇಕು. ಕನ್ನಡ ಸಂಸ್ಕೃತಿಯನ್ನು ಎತ್ತಿ ತೋರಿಸುವ ಮತ್ತು ಕನ್ನಡ ನುಡಿ ಪ್ರಚಾರದ ಚಟುವಟಿಕೆಗಳು ನಡೆಯಬೇಕು. ಇವುಗಳಿರದಿದ್ದರೆ ಸಾಂಸ್ಕೃತಿಕ ಸಂಘಗಳು ಮುಂದೆ ಬರುವದು ಹೇಗೆ? ಕೆಲ ದಿನ ನಾನೂ ಕ್ಲಬ್ಬಿನ ಸದಸ್ಯನಾಗಿದ್ದೆ' ಎಂದು ರಾಯರು ಸಂಸ್ಥೆಗಳ ಬೆಳವಣಿಗೆಗೆ ಬೇಕಾದ ನಿಜವಾದ ಸಾಧನಗಳನ್ನು ವಿವರಿಸಿದರು.

'ಇಲ್ಲಿ ಕನ್ನಡವು ತಲೆಯೆತ್ತಿ ನಿಲ್ಲಲು ತಮ್ಮಿಂದ ಸಹಾಯ ದೊರೆಯಬೇಕಾದುದು ಅಗತ್ಯ. ತಮ್ಮಂತಹರು ಈ ಕಾರ್ಯಕ್ಕೆ ಮನಸ್ಸು ಹಾಕಿದರೆ ಈ ಕೆಲಸವು ಬಲು ಹಗುರಾಗುವದು' ಎಂದು ಮಾತು ಮುಂದರಿಸಿದೆ.

'ನೀವನ್ನುವದು ನಿಜ. ಇಲ್ಲಿ ಒಂದು ಕನ್ನಡ ಶಾಲೆಯನ್ನು ನಡೆಸುವದು ಸಾಧ್ಯವಿದೆ. ಅದನ್ನೇಕೆ ಪ್ರಾರಂಭಿಸಬಾರದು? ಎಂದು ಈಗೆಂಟು ದಿನಗಳ ಹಿಂದೆ ಇಲ್ಲಿಯ ಪೌರಸಭೆಯ ಶಿಕ್ಷಣ ಸಮಿತಿಯ ಚೇರಮನ್ನರನ್ನು ಕೇಳಿದೆ. ಅದಕ್ಕೆ ಅವರು 'ಹೌದು ರಾಸ್ತೆವಾಡಿಯಲ್ಲಿ ಹೆಚ್ಚಾಗಿ ಕನ್ನಡಿಗರಿರುತ್ತಾರೆಂದು ಕೇಳಿದ್ದೇನೆ. ಅಲ್ಲಿ ಕನ್ನಡ ಶಾಲೆ

ನಡೆಯಬಹುದು. ಈ ಬಗ್ಗೆ ಪ್ರಯತ್ನಿಸುತ್ತೇನೆಂದು ಹೇಳಿದರು. ಅವರ ಈ ಕೆಲಸದಲ್ಲಿ ಕನ್ನಡ ಕಾರ್ಯಕರ್ತರ ಸಹಾಯಬೇಕಲ್ಲವೇ? ಕನ್ನಡ ಮಕ್ಕಳ ಸಂಖ್ಯೆಯನ್ನು ಗೊತ್ತುಪಡಿಸಿ, ಅವರು ತೆರೆಯಬೇಕೆಂದಿರುವ ಈ ಶಾಲೆಗೆ ಬರುವಂತೆ ಮಾಡುವದು ಅವಶ್ಯವಿದೆ' ಎಂದು ಕನ್ನಡ ಪ್ರಸಾರಕ್ಕಾಗಿ ತಮ್ಮಲ್ಲಿ ಇರುವ ಕಳಕಳಿಯನ್ನು ವ್ಯಕ್ತಪಡಿಸಿದರು.

'ಇಲ್ಲಿಯ ಕಾಲೇಜು ಕರ್ನಾಟಕ ಸಂಘ ನೆಟ್ಟಗೆ ನಡೆದಂತಿದೆ' ಎಂದು ಮತ್ತೊಂದು ಪ್ರಶ್ನೆಯನ್ನು ಕೇಳಿ ಉತ್ತರವನ್ನು ನಿರೀಕ್ಷಿಸಹತ್ತಿದೆ. ತಟ್ಟನೆ ಉತ್ತರ ಬಂತು. 'ಆ ಕಾಲೇಜಿನ ಕರ್ನಾಟಕ ಸಂಘಕ್ಕೆ ನಾನೇ ಅಧ್ಯಕ್ಷನಿದ್ದೇನೆ. ವಿದ್ಯಾರ್ಥಿಗಳಲ್ಲಿ ಕಾರ್ಯಶಕ್ತಿ ಮತ್ತು ಉತ್ಸಾಹಗಳು ಬಹಳ. ಅದರಿಂದ ಅವರು ಏರ್ಪಡಿಸಿದ ಕಾರ್ಯಕ್ರಮಗಳು ಮೇಲ್ತರಗತಿಯವಿರುತ್ತವೆ. ಆದರೆ ವಿದ್ಯಾರ್ಥಿಗಳು ನಡಸುವ ಸಂಸ್ಥೆಗಳಲ್ಲಿ ಒಂದೇ ಬಗೆಯ ಧೋರಣವನ್ನಿಟ್ಟುಕೊಂಡ ಯಾವದೊಂದು ವಿಧಾಯಕ ಕಾರ್ಯವು ನಡೆದದ್ದು ಕಂಡು ಬರುವುದು ತೀರ ಕಡಿಮೆ. ಈ ಕೆಲಸಕ್ಕೆ ಇಲ್ಲಿಯ ಕನ್ನಡ ನಿವಾಸಿಗಳು ಹೆಚ್ಚು ಆಸ್ಥೆ ವಹಿಸಬೇಕೆಂದು ನನ್ನ ಮತ' ಎಂದು ಸ್ಪಷ್ಟೀಕರಣ ಮಾಡಿದರು. ಅಷ್ಟರಲ್ಲಿ ವೇಳೆ ಬಹಳವಾದ್ದರಿಂದ ಅವರ ಅಪ್ಪಣೆ ಪಡೆದುಕೊಂಡು ಹೊರಬಿದ್ದೆ. ನನ್ನ ಪರಿಚಯ ಹೆಚ್ಚಾಗಿರದಿದ್ದರೂ ನನ್ನ ಕೂಡ ಮನಬಿಚ್ಚಿ ಮಾತಾಡಿದುದಕ್ಕಾಗಿ ರಾಯರನ್ನು ಮನದಲ್ಲಿಯೇ ಬಹಳವಾಗಿ ಕೊಂಡಾಡಿದೆ.

## ಮುಂಬಯಿ ಹೈ ಕೋರ್ಟಿನಲ್ಲಿ ನ್ಯಾಯಮೂರ್ತಿಗಳಾದುದು

೧೯೩೮ನೇ ಅಕ್ಟೋಬರ ತಿಂಗಳ ೨೧ನೇ ತಾರೀಖು. ಅಂದು ಸೋಮವಾರ. ಪ್ರತಿನಿತ್ಯ ಬೆಳಗಿನ ಕಾರ್ಯಕ್ರಮದಂತೆ ಸುದ್ದಿಪತ್ರವನ್ನೋದುತ್ತಿದ್ದೆ. 'ಪುಣೆಯ ಜಿಲ್ಹಾ ನ್ಯಾಯಾಧೀಶರಾದ ಶ್ರೀಮಾನ್ ಎನ್. ಎಸ್. ಲೋಕೂರವರನ್ನು ಮುಂಬಯಿ ಹಾಯಕೋರ್ಟಿನಲ್ಲಿ ಹಂಗಾಮಿ ನ್ಯಾಯಾಧೀಶರೆಂದು ನೇಮಿಸಲಾಗಿದೆ.' ಹಾಗೂ 'ಅಂದೇ ಅವರು ನ್ಯಾಯಾಸ್ಥಾನದ ಮೇಲೆ ಕೂಡುವರು' ಎಂದು ಪ್ರಸಿದ್ಧವಾಗಿತ್ತು. ಇದನ್ನೋದಿ ನನಗಾದ ಆನಂದವನ್ನು ಶಬ್ದಗಳು ತಿಳಿಸಲರಿ

ಯುವು. ಮುಂಬಯಿ ಕನ್ನಡಿಗರಿಗೆ. ಅದೇಕೆ ಇಡೀ ಕರ್ನಾಟಕಕ್ಕೆ ಈ ಸುದ್ದಿಯು ಆನಂದ, ಹೆಮ್ಮೆಗಳನ್ನುಂಟುಮಾಡಿರಲು ಸಾಕು. ಹಿಂದಕ್ಕೆ ಮಾನ್ಯ ಕನ್ನಡಿಗರಾದ ದಿವಂಗತ ಸರ್ ವಿಟ್ಠಲ ನಾರಾಯಣ ಚಂದಾವರಕರರು ಈ ಉಚ್ಚ ಪದವಿಗೇರಿದ್ದರೆಂದು ಕೇಳಿದ್ದೆ. ಈಗ ಅಚ್ಚು-ಕೆಚ್ಚಿನ ಕನ್ನಡಿಗರಾದ ಶ್ರೀಮಾನ್ ಲೋಕೂರ ನಾರಾಯಣ ರಾಯರು ಈ ಉನ್ನತ ಪದವಿಗೇರಿದ್ದನ್ನು ಕಾಣುವ ಸುಯೋಗ ನನಗೆ ಒದಗಿತು.

ಅಂದೇ ಮಧ್ಯಾಹ್ನದ ಬಿಡುವಿನಲ್ಲಿ ಹಾಯಕೋರ್ಟಿಗೆ ಹೋದೆ. ಹಾಯಕೋರ್ಟಿನ ವಕೀಲರಾದ ಜಠಾರ ಶಂಕರರಾಯರು ಆಗ ಕರ್ನಾಟಕ ಸಂಘದ ಅಧ್ಯಕ್ಷರಾಗಿದ್ದರು. ಅವರನ್ನು ಕಂಡೆ; ಎಲ್ಲ ಕನ್ನಡ ವಕೀಲರ ಮೋರೆಯ ಮೇಲೆ ಆನಂದದ ಕಳೆ ಹೊರ ಹೊಮ್ಮುತ್ತಿತ್ತು. 'ಏನು ಇಮಾರತಿಯವರೇ ಲೋಕೂರವರು ನ್ಯಾಯಮೂರ್ತಿಗಳಾದದ್ದನ್ನು ಕೇಳಿ ಇಷ್ಟು ಬೇಗ ಬಂದಿರಾ?' ಎಂದು ಶಂಕರರಾಯರು ವಿಚಾರಿಸಿದರು. ''ಹೌದು, ನಮಗಾದ ಆನಂದವನ್ನು ಹಾಗೂ ಲೋಕೂರವರ ಬಗೆಗಿದ್ದ ನಮ್ಮ ಗೌರವವನ್ನು ಹೇಗೆ ಬಹಿರಂಗವಾಗಿ ವ್ಯಕ್ತಪಡಿಸಬೇಕೆಂಬ ವಿಷಯವನ್ನು ತಮ್ಮ ಕೂಡ ಚರ್ಚಿಸಬೇಕೆಂದು ಬಂದೆ'' ಎಂದು ನನ್ನ ಮನದಿಂಗಿತವನ್ನುಸುರಿದೆ. ಇಲ್ಲಿಯ ಕನ್ನಡ ಹಿರಿಯರಾದ ಶ್ರೀ ಜಹಾಗೀರದಾರ ವಕೀಲರ ಸಲಹೆಯನ್ನು ಪಡೆದೆವು. ನ್ಯಾಯಮೂರ್ತಿಗಳಿಗೆ ಸಂಘದ ಪರವಾಗಿ ಒಂದು ಸಂತೋಷ ಕೂಟವನ್ನು ಏರ್ಪಡಿಸಬೇಕೆಂದು ಗೊತ್ತಾಯಿತು.

ರಾತ್ರಿ ಎಂಟು ಗಂಟೆಯ ಸಮಯ. ಇಲ್ಲಿಯ ಒಂದು ದೊಡ್ಡ ಹೊಟೇಲದ ಗಚ್ಚಿ (ಘರಸಿನ ಮಾಳಿಗೆ)ಯ ಮೇಲೆ ಪಾಶ್ಚಿಮಾತ್ಯ ಪದ್ಧತಿಯಂತೆ ಭೋಜನವು ಸಿದ್ಧವಾಗಿತ್ತು. ಏರ್ಪಾಡು ಪಾಶ್ಚಿಮಾತ್ಯ ಪದ್ಧತಿಯದಾದರೂ ಭೋಜನವು ಮಾತ್ರ ಕೇವಲ ಸಸ್ಯಾಹಾರದ್ದೇ ಆಗಿತ್ತು. ವಿದ್ಯುದ್ದೀಪದ ಹೊಳಪಿನಲ್ಲಿ ಮತ್ತಷ್ಟು ಹೊಳೆಯುವ ಬಿಳೀ ಅರಿವೆಯನ್ನು ಹೊದ್ದುಕೊಂಡು ಮೇಜುಗಳು ಸಾಲುಸಾಲಾಗಿ ನಿಂತಿದ್ದವು. ಅದರ ಮೇಲೆ ಊಟದ ಪಾತ್ರೆಗಳು ಅಂದವಾಗಿ ಇರಿಸಲ್ಪಟ್ಟಿದ್ದವು. ಬದಿಯಲ್ಲಿ

ಖುರ್ಚಿಗಳು ಭೋಜನಕ್ಕೆ ಆಮಂತ್ರಿತ ಅತಿಥಿಗಳ ಬರವನ್ನು ನಿರೀಕ್ಷಿಸುತ್ತ ಅವರ ಸೇವೆಗೆ ಸಿದ್ಧವಾಗಿ ನಿಂತಿದ್ದವು. ಗೊತ್ತಾದ ಹೊತ್ತಿಗೆ ಸರಿಯಾಗಿ ಎಲ್ಲರೂ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತರು. ಈ ಬಗೆಯ ಸತ್ಕಾರ ಸಮಾರಂಭದ ಏರ್ಪಾಡು ಮಾಡಲು ಅವಕಾಶ ದೊರೆತದ್ದಕ್ಕಾಗಿ ಸಂಘದ ಕಾರ್ಯಕರ್ತರು ಹಿಗ್ಗಿದರು. ಈ ಸಮಾರಂಭದಲ್ಲಿ ಭಾಗ ವಹಿಸಿದ ಅತಿಥಿಗಳು ಹೆಮ್ಮೆ ತಾಳಿದರು. ಅತಿಥಿಗಳನ್ನು ಸ್ವಾಗತಿಸುತ್ತ ಸಂಘದ ಅಧ್ಯಕ್ಷರು ಹೀಗೆ ನುಡಿದರು. 'ಈ ಸತ್ಕಾರ ಕೂಟವನ್ನೇರ್ಪಡಿಸಿದ ಸಂಘವಿನ್ನೂ ಚಿಕ್ಕದು. ಇಂದಿನ ಅತಿಥಿಗಳ ಯೋಗ್ಯತೆ ದೊಡ್ಡದು. ಹೀಗಾಗಿ ಈ ಸತ್ಕಾರ ಕೂಟದಿಂದ ಸಂಘವು ತನ್ನನ್ನೇ ತಾನು ಗೌರವಿಸಿಕೊಂಡಂತಾಗಿದೆ. ನ್ಯಾಯಮೂರ್ತಿ ಲೋಕೂರವರು ತಮ್ಮ ಜಾಣ್ಮೆ, ಪ್ರಾಮಾಣಿಕತನ, ಶಾಂತಸ್ವಭಾವ, ಕಾರ್ಯಾಸಕ್ತಿ ಮುಂತಾದ ಸದ್ಗುಣಗಳಿಂದ ಸರಕಾರದಲ್ಲಿ ಅತಿ ದೊಡ್ಡ ಸ್ಥಾನ ಗಳಿಸಿದ ಹಾಗೆ ಜನ ಪ್ರಿಯರೂ ಆಗಿದ್ದಾರೆ. ಇವರು ಕಲಾಪ್ರಿಯರು, ಅಂತೆಯೇ ಇವರ ಮಕ್ಕಳು ಆಧುನಿಕ ಉಚ್ಚ ಶಿಕ್ಷಣ ಪಡೆದುದರ ಜೊತೆಗೆ ಚಿತ್ರಕಲೆ, ಸಂಗೀತ, ನೃತ್ಯ ಮೊದಲಾದ ಕಲೆಗಳ ಅಭ್ಯಾಸದಲ್ಲಿ ತೊಡಗಿರುವರು. ಲೋಕೂರ ನಾರಾಯಣರಾಯರು ನ್ಯಾಯಮೂರ್ತಿಗಳಾದದ್ದು ಇಡೀ ಕನ್ನಡನಾಡಿಗೆಲ್ಲ ಅಭಿಮಾನದ ಸಂಗತಿ. ಅವರ ಆಯುರಾರೋಗ್ಯ ಬೆಳೆಯಲಿ. ಅವರಿಂದ ಕನ್ನಡಿಗರ ಹೆಚ್ಚಳವಾಗಲಿ' ಹೀಗೆ ತಮ್ಮ ಹೃದಯದಲ್ಲಿಯ ಮಾತುಗಳನ್ನು ಹೇಳಿದರು. ಆ ಮೇಲೆ ನ್ಯಾಯಮೂರ್ತಿಗಳು ಈ ಸತ್ಕಾರದಿಂದ ತಮಗಾದ ಆನಂದವನ್ನು ತೋರಿ 'ಈಗೆರಡು ವಾರಗಳಿಂದ ಆಶ್ಚರ್ಯಕರ ಘಟನೆಯ ಅನುಭವಗಳೇ ನನಗೆ ಬರ ಹತ್ತಿವೆ. ಮುಂಚಿತವಾಗಿ ಏನೂ ಗೊತ್ತಿಲ್ಲದೆ 'ಮಾರನೆಯ ಸೋಮವಾರದಿಂದ ನಿಮ್ಮನ್ನು ಹಾಯಕೋರ್ಟಿನ ನ್ಯಾಯಾಧೀಶರನ್ನಾಗಿ ನೇಮಿಸಿದೆ' ಎಂದು ಹೇಳಿದುದೊಂದು ಆಶ್ಚರ್ಯ. ಇಲ್ಲಿ ಬಂದ ಕೂಡಲೇ ಇಲ್ಲಿಯ ಕರ್ನಾಟಕ ಸಂಘವು ಸುವ್ಯವಸ್ಥಿತವಾದ ಈ ಪಾಶ್ಚಿಮಾತ್ಯ ಪದ್ಧತಿಯ ಸತ್ಕಾರ ಕೂಟದಿಂದ ನನ್ನನ್ನು ಗೌರವಿಸಿದ್ದು ಒಂದು ಆಶ್ಚರ್ಯವೆಂದೇ ನನ್ನ ಭಾವನೆ. ನನ್ನ ಸಲುವಾಗಿ ತಾವು ತೋರಿದ

ಆತ್ಮೀಯ ಭಾವನೆಗಾಗಿ ನಾನು ಈ ಸಂಘಕ್ಕೆ ಕೃತಜ್ಞನಾಗಿದ್ದೇನೆ. ನಾನೊಬ್ಬ ವ್ಯಕ್ತಿ. ವ್ಯಕ್ತಿಯು ಸಂಘಕ್ಕಿಂತ ದೊಡ್ಡವನಾಗಲಾರ. ಆದಕಾರಣ ಈ ಸತ್ಕಾರದಿಂದ ಸಂಘವು ನನ್ನನ್ನು ಗೌರವಿಸಿದೆ, ಅದು ತನ್ನನ್ನು ತಾನು ಗೌರವಿಸಿಕೊಂಡಿಲ್ಲ. ಇಲ್ಲಿಯ ಕನ್ನಡಿಗರಲ್ಲಿ ಹೆಚ್ಚು ಜಾಗ್ರತಿಯುಂಟಾಗಿ ಕರ್ನಾಟಕ ಸಂಘವು ಬಲಗೊಂಡು ಹೆಚ್ಚಾಗಿ ನಾಡ ನುಡಿ ಸೇವೆಯನ್ನು ಸಲ್ಲಿಸುವಂತಾಗಲಿ!' ಎಂದು ತಮ್ಮ ಸೌಜನ್ಯವನ್ನೂ, ಕನ್ನಡದ ಕಳಕಳಿಯನ್ನೂ ವಿಶದಪಡಿಸಿದರು.

ಹಾಯಕೋರ್ಟು ನ್ಯಾಯಾಧೀಶರೆಂದು ಇವರ ನೇಮಕವು ಕೆಲ ತಿಂಗಳ ಮಟ್ಟಿಗೆ ಮಾತ್ರ ಇತ್ತು. ಆ ಅವಧಿಯಲ್ಲಿ ಇವರು ಕೊಟ್ಟ ನ್ಯಾಯ ತೀರ್ಪುಗಳು ಇವರ ಅಸಾಮಾನ್ಯ ಕಾಯಿದೆಜ್ಞಾನವನ್ನೂ ಸಮದೃಷ್ಟಿಯನ್ನೂ ಬೆಳಕಿಗೆ ತಂದವು. ನ್ಯಾಯ ವಿಚಾರಣೆ ನಡೆದಾಗ ಏಕಾಗ್ರ ಚಿತ್ತದಿಂದ ಉಭಯ ಪಕ್ಷದವರು ಹೇಳುವ ಸಂಗತಿಗಳನ್ನು ಕೇಳಿ, ನಿಜ ಸ್ಥಿತಿಯನ್ನು ಕಂಡುಹಿಡಿದು, ನಿಷ್ಪಕ್ಷಪಾತದ ನಿರ್ಣಯವನ್ನು ಕೊಡುವುದರಲ್ಲಿ ರಾಯರದೇ ಮೇಲುಗೈ. ಇವರ ಈ ಪಾಂಡಿತ್ಯ ಮತ್ತು ನ್ಯಾಯ ದಾನ ಪದ್ಧತಿಯು ವರಿಷ್ಠ ನ್ಯಾಯಾಧೀಶರ ಮನವನ್ನು ಚೆನ್ನಾಗಿ ಹಿಡಿದವು. ಇಂತಹ ಮೇಧಾವಿಯು ಹಾಯಕೋರ್ಟು ನ್ಯಾಯಸ್ಥಾನವನ್ನು ಅಲಂಕರಿಸುವದು ಅತ್ಯಾವಶ್ಯಕವೆಂದು ಅವರಿಗೆ ತೋರಿತು. ಅಂತೆಯೇ ಇವರು ೧೯೩೯ನೇ ಇಸ್ವಿಯಲ್ಲಿ ಪುಣೆಯ ಜಿಲ್ಹಾ ನ್ಯಾಯಾಸ್ಥಾನಕ್ಕೆ ಮರಳಿ ಹೋದರೂ ಕೂಡ ಮುಂದೆ ಎರಡೇ ವರ್ಷಗಳಲ್ಲಿ ಪುನಃ ಇಲ್ಲಿ ಬರುವಂತೆ ಏರ್ಪಾಡು ಮಾಡಿದರು. ಇದರ ಪರಿಣಾಮವಾಗಿ ೧೯೪೨ನೇ ಅಗಸ್ಟ ೨೪ನೇ ತಾರೀಖಿನ ದಿನ ರಾಯರು ಮತ್ತೆ ಹಾಯಕೋರ್ಟಿನ ನ್ಯಾಯಸ್ಥಾನವನ್ನೇರಿದರು.

೧೯೪೨ನೇ ಆಗಸ್ಟ ತಿಂಗಳೆಂದರೆ ಎಲ್ಲ ಭಾರತೀಯರು ಎಂದೂ ಮರೆಯದ ತಿಂಗಳು. ಅಖಿಲ ಭಾರತ ರಾಷ್ಟ್ರ ಸಭೆಯವರು ಆದೇ ತಿಂಗಳ ೮ನೇ ತಾರೀಖಿನ ದಿನ 'ಭಾರತದಿಂದ ಎದ್ದೋಡು' (Quit India) ಗೊತ್ತುವಳಿಯನ್ನು ಸ್ವೀಕರಿಸಿದರು. ಅಂದಿನಿಂದ ದೇಶದಲ್ಲಿ ಒಮ್ಮೆಲೇ ಎಲ್ಲ ಕಡೆಗೆ ಚಳುವಳಿಯು ಕಾಡುರಿಯಂತೆ ಹಬ್ಬಿತು.

ಮುಂದಾಳುಗಳು ಕೆಲವರು ಸೆರೆಮನೆಯನ್ನು ಸೇರಿದರೆ ಕೆಲವರು ನೆಲ ಮನೆಯನ್ನು ಆಶ್ರಯಿಸಬೇಕಾಯಿತು. ಎಲ್ಲೆಡೆಯಲ್ಲಿ ಸ್ವಾತಂತ್ರ್ಯದ ಕಹಳೆ ಮೊಳಗುತ್ತಿತ್ತು.

ಕರ್ನಾಟಕ ಸಂಘವು ಈ ಸಲ ರಾಯರನ್ನು ಮೊದಲಿನಂತೆ ಬಹಿರಂಗವಾಗಿ ಗೌರವಿಸುವದು ಬಹು ಬಿಕ್ಕಟ್ಟಿನದಾಯಿತು. ಈ ಪರಿಸ್ಥಿತಿಯಲ್ಲಿ ಬಹಿರಂಗ ಸತ್ಕಾರವು ಕಾರ್ಯಕರ್ತರ ಮನಸ್ಸಿಗೂ ಬರಲಿಲ್ಲ. ಆದರೆ ರಾಯರನ್ನು ಸತ್ಕರಿಸದೆ ಹಾಗೇ ಬಿಡುವದು ತಮ್ಮ ಕರ್ತವ್ಯದಲ್ಲಿ ತಾವು ತಪ್ಪಿದಂತೆ, ಎಂದು ಅವರ ಮನದ ಕೊರೆ. ಈ ಉಚ್ಚ ಸ್ಥಾನಕ್ಕೆ ಮತ್ತೆ ಬಂದದ್ದಕ್ಕಾಗಿ ಅಭಿನಂದನಪರವಾದ ಗೊತ್ತುವಳಿಯನ್ನು ಕಾರ್ಯಕಾರೀ ಮಂಡಳದ ಸದಸ್ಯರೆಲ್ಲರೂ ರಾಯರ ನಿವಾಸಸ್ಥಾನಕ್ಕೆ ಹೋಗಿ ಅರ್ಪಿಸಬೇಕೆಂದು ನಿಶ್ಚಿತವಾಯಿತು. ಅದರಂತೆ ಒಂದು ಅನುಕೂಲ ದಿನ ಗೊತ್ತುಮಾಡಿ ಎಲ್ಲರೂ ಅವರ ಮನೆಗೆ ತೆರಳಿದೆವು. ರಾಯರೂ ಅವರ ಪತ್ನಿಯವರೂ ನಗೆಮೊಗದಿಂದ ಎಲ್ಲರನ್ನು ಸ್ವಾಗತಿಸಿದರು. 'ಸ್ವಾತಂತ್ರ್ಯದ ಹೋರಾಟ ದೇಶದಲ್ಲಿ ಜೋರಿನಿಂದ ಸಾಗಿರುವಾಗ ಈ ಬಗೆಯ ಸತ್ಕಾರಗಳು ಅಗತ್ಯ ಕಾಣುವದಿಲ್ಲ' ಎಂದು ನ್ಯಾಯಮೂರ್ತಿಗಳು ಕೂಡಲೇ ತಮ್ಮ ನಿರ್ಣಯವನ್ನು ಹೇಳಿ ತಮ್ಮಲ್ಲಿ ಹುದುಗಿಕೊಂಡ ದೇಶಾಭಿಮಾನವನ್ನು ತೋರ್ಪಡಿಸಿದರು. ಸಮಯೋಚಿತ ನಾಲ್ಕು ಮಾತುಗಳಿಂದ ನ್ಯಾಯಮೂರ್ತಿಗಳನ್ನು ಸತ್ಕರಿಸಲಾಯಿತು. 'ಮುಂಬಯಿಯಲ್ಲಿ ಕನ್ನಡಿಗರ ಸಂಖ್ಯೆ ಸಾಕಷ್ಟು ದೊಡ್ಡದಿದೆ. ಹಾಗೇ ಇಲ್ಲಿ ಕರ್ನಾಟಕ ಮತ್ತು ಕನ್ನಡಿಗರ ಸಂಘಗಳ ಸಂಖ್ಯೆಯೂ ದೊಡ್ಡದಿದೆಯೆಂದು ಕೇಳಿದ್ದೇನೆ. ಆದರೆ ಯಾವ ಸಂಘವೂ ದೊಡ್ಡದಾಗಿ ಬಲಿಷ್ಠವಾಗಿ ಇರದಿರುವದು ಶೋಚನೀಯವಾದದ್ದು. ಪ್ರಾಂತಿಕ ಕೇಂದ್ರವಾದ ಈ ಪಟ್ಟಣದಲ್ಲಿ ಕರ್ನಾಟಕ ಸಂಘವು ಬಲವುಳ್ಳದ್ದಾದರೆ ಕರ್ನಾಟಕಕ್ಕೂ ಕನ್ನಡಿಗರಿಗೂ ತುಂಬ ಅನುಕೂಲವಾಗುವದು. ಈ ವಿಷಯದಲ್ಲಿ ನಾನು ನನ್ನ ಕೈಲಾದ ಮಟ್ಟಿಗೆ ಸಹಾಯ ಮಾಡಲು ಯಾವಾಗಲೂ ಸಿದ್ಧನಿದ್ದೇನೆ.' ಎಂದು ಉತ್ತರವಿತ್ತು ಕನ್ನಡಿಗರ ಸಮಸ್ಯೆಗಳನ್ನು ಬಗೆಹರಿಸುವದಕ್ಕೆ ಹಾತೊರೆಯುತ್ತಿರುವ ತಮ್ಮ ಮನಸ್ಥಿತಿ

ಯನ್ನು ನಮುಗರುಹಿದರು. ಉಪಹಾರದ ಆತಿಥ್ಯವನ್ನು ಪಡೆದು ಆನಂದದಿಂದ ಎಲ್ಲರೂ ಮರಳಿದೆವು.

## ಕರ್ನಾಟಕ ಸಂಘದ ಅಧ್ಯಕ್ಷರಾದದ್ದು

ರಾಯರು ಮುಂಬಯಿ ನಿವಾಸಿಗಳಾದರು. ಕೆಲ ತಿಂಗಳು ಕಳೆದವು. 'ರಾಯರು ಸಂಘದ ಅಧ್ಯಕ್ಷರಾದರೆ ಸಂಘದ ಹೆಸರು ದೊಡ್ಡದಾಗಿ ಅದರ ಶಕ್ತಿ ಬೆಳೆಯಬಹುದಲ್ಲವೇ' ಎಂದು ನನಗೆ ನಾನೇ ಕೇಳಿಕೊಂಡೆ. 'ಅವರು ಇದಕ್ಕೆ ಒಪ್ಪಬಹುದೋ? ಒಪ್ಪಿದರೂ ಸಂಘದ ಕಾರ್ಯದಲ್ಲಿ ಆಸಕ್ತಿಯನ್ನು ತೋರಿಸಬಹುದೋ?' ಎಂಬ ಪ್ರಶ್ನೆಗಳು ನನ್ನೆದುರು ನಿಂತವು. ಅವರಬಗ್ಗೆ ಹೆಚ್ಚು ಗೊತ್ತಿಲ್ಲದ ನನಗೆ ಈ ಪ್ರಶ್ನೆಗಳು ಬಗೆಹರಿಯದಂತಾದವು. ಆಗಿನ ಸಂಘದ ಅಧ್ಯಕ್ಷರಾದ ವೈ. ವಾ. ಎಸ್. ಆರ್. ಜೋಶಿಯವರನ್ನು ಮತ್ತು ಸಂಘವು ಹುಟ್ಟಿದಾಗಿನಿಂದ ಇಲ್ಲಿಯ ವರೆಗೆ ಅದರ ಏಳ್ಗೆಗಾಗಿ ಬಿಟ್ಟುಬಿಡದೆ ಹೆಣಗಾಡುತ್ತಿರುವ ಗೆಳೆಯ ಜಾವೂರ ಲಕ್ಷ್ಮಣರಾಯರನ್ನು ಈ ವಿಷಯವನ್ನು ಕುರಿತು ವಿಚಾರಿಸಿದೆ. ಮೊದಮೊದಲು ಅವರದು ಅನುಕೂಲ ಅಭಿಪ್ರಾಯವಿರಲಿಲ್ಲ. 'ಸಂಘವು ಚಿಕ್ಕದು, ರಾಯರು ದೊಡ್ಡವರು. ಅವರು ಅಧ್ಯಕ್ಷರಾಗುವದು ಅಷ್ಟು ಸರಿಯಾಗಲಾರದು' ಎಂದು ಅವರ ವಾದ. 'ರಾಯರು ದೊಡ್ಡವರಾದರೂ ಕನ್ನಡಿಗರಲ್ಲವೇ? ಕನ್ನಡಿಗರು ಕರ್ನಾಟಕ ಸಂಘಕ್ಕಾಗಿ ಕೆಲಸ ಮಾಡುವದು ಯೋಗ್ಯವೂ, ನ್ಯಾಯವೂ ಆಗಿದೆ. ಈ ವಿಷಯದಲ್ಲಿ 'ನಾನು ದೊಡ್ಡವ' 'ನೀನು ಸಣ್ಣವ' ಎಂಬ ಅಹಂಭಾವದ ವಿಚಾರಗಳಿಗೆ ಎಡೆ ಇಲ್ಲ. ದೊಡ್ಡವರು ಕರ್ನಾಟಕದ ಸೇವೆ ಮಾಡಬಾರದೋ? ಈ ಕೆಲಸದ ಗುತ್ತಿಗೆಯನ್ನು ಸಣ್ಣವರೇ ಯಾಕೆ ತೆಗೆದುಕೊಳ್ಳಬೇಕು? ದೊಡ್ಡ ವ್ಯಕ್ತಿಯು ಸಂಘಕ್ಕೆ ಇನ್ನೂ ದೊರೆಯದ್ದರಿಂದ ಸಂಘದ ಹೆಸರೂ ದೊಡ್ಡದಾಗಿಲ್ಲ. ಆದುದರಿಂದ ಈ ಕಾರ್ಯಕ್ಕೆ ರಾಯರ ಮನ ಒಲಿಸಲೇ ಬೇಕು. ಅದರಿಂದ ನಿಶ್ಚಯವಾಗಿಯೂ ಸಂಘದ ವ್ಯಾಪ್ತಿ ಬೆಳೆದು ಅದರಿಂದ ಹೆಚ್ಚು ಕಾರ್ಯಗಳಾಗುತ್ತವೆ' ಎಂದು ಪ್ರತಿಪಾದಿಸಿದೆ. ಆಮೇಲೆ ಅವರೀ

ರ್ವರೂ ಈ ಮಾತಿಗೊಪ್ಪಿದರು.

೧೯೪೩ ನೇ ಆಗಸ್ಟ ತಿಂಗಳು. ವಾರ್ಷಿಕ ಸಾಧಾರಣ ಸಭೆ ಅದೇ ತಿಂಗಳಲ್ಲಿ ಜರುಗುವದಿತ್ತು. ಬರುವ ವರ್ಷದ ಕಾರ್ಯಕಾರೀ ಮಂಡಳದ ಆಯ್ಕೆಯು ವಾಡಿಕೆಯಂತೆ ಈ ಸಭೆಯಲ್ಲಿ ಆಗುವದಿತ್ತು. ಸಭೆಗೆ ಇನ್ನೂ ನಾಲ್ಕು ದಿನಗಳಿದ್ದವು. ಆಗ ಒಂದು ಸಂಜೆ ಸಂಘದ ಅಧ್ಯಕ್ಷರಾದ ಜೋಶಿಯವರು, ಗೆಳೆಯ ಜಾವೂರರು ಹಾಗು ನಾನು ಮುಂಚಿತವಾಗಿ ಗೊತ್ತಾದಂತೆ ರಾಯರ ನಿವಾಸಸ್ಥಾನಕ್ಕೆ ಹೋದೆವು. ಯಾರು ಯಾರು ಯಾವ ಯಾವ ಮಾತನಾಡಬೇಕೆಂಬುದನ್ನು ಮೊದಲೆ ಗೊತ್ತುಪಡಿಸಿಕೊಂಡಿದ್ದೆವು. ಆ ಮಾತು ಈ ಮಾತು ಆದ ಮೇಲೆ ಗೆಳೆಯ ಜಾವೂರರು 'ಇಲ್ಲಿ ಒಂದು ಬಂಗಾಲಿ ಅಸೋಸಿಯೇಶನ್ ಇದೆಯಂತೆ.' ಎಂದು ತಮ್ಮ ಮಾತನ್ನು ಪ್ರಾರಂಭಿಸಿದರು. 'ಹೌದು ಅದಕ್ಕೆ ಜಸ್ಟಿಸ್ ಸೇನ ಇವರು ಅಧ್ಯಕ್ಷರಿದ್ದಾರೆ. ಆ ಅಸೋಸಿಯೇಶನ್ನು ಒಳ್ಳೇ ಕಾರ್ಯ ಮಾಡುತ್ತಿದೆ' ಎಂದು ನಾನು ಅದಕ್ಕೆ ಉತ್ತರ ಕೊಟ್ಟೆ. 'ಇಲ್ಲಿ ಕರ್ನಾಟಕ ಸಂಘವೂ ಇದೆ, ಕನ್ನಡಿಗ ಜಸ್ಟಿಸ್‌ರೂ ಇದ್ದಾರೆ. ಆದರೆ....' ಎಂದು ಅರ್ಥಕ್ಕೆ ನಗೆಯಿಂದ ತಮ್ಮ ಮಾತನ್ನು ಮುಗಿಸಿದರು ಅಧ್ಯಕ್ಷ ಜೋಶಿಯವರು. ಈ ನಮ್ಮ ಮಾತಿನ ಇಂಗಿತ ರಾಯರ ಕುಶಾಗ್ರ ಬುದ್ಧಿಗೆ ಕೂಡಲೇ ಹೊಳೆದುಹೋಗಿತ್ತು. ಅವರು ನಸು ನಕ್ಕು 'ನಾನು ಸಂಘದ ಅಧ್ಯಕ್ಷನಾಗಬೇಕೆನ್ನುವಿರಾ?' ಎಂದು ಕೇಳಿದರು. ಗೋಣು ಹಾಕುತ್ತ ಎಲ್ಲರೂ ನಕ್ಕೆವು. ಸದಸ್ಯರ ಅರ್ಜಿಯ ಪತ್ರಕವನ್ನು ರಾಯರ ಕಡೆ ಚಾಚಿದೆ. ಕೂಡಲೇ ಅದನ್ನು ತೆಗೆದುಕೊಂಡು ಒಳಗೆ ಹೋಗಿ ಅದನ್ನು ತುಂಬಿ ಆಜೀವ ಸದಸ್ಯತ್ವದ ವಂತಿಗೆಯ ಹಣದ ಚೆಕ್ಕೊಂದನ್ನು ಅದಕ್ಕೆ ಅಂಟಿಸಿ ನನ್ನ ಕೈಗಿತ್ತರು. 'ಇನ್ನೇನು ಹೈ ಕೋರ್ಟ ನ್ಯಾಯಾಧೀಶರಂತಹರ ನೇತೃತ್ವದಲ್ಲಿ ಸಂಘವು ನಡೆಯುವದು. ಅದರ ಬೆಳಕು ಎಲ್ಲ ಕಡೆ ಹರಡುವದು' ಎಂದು ಹಿರಿ ಹಿರಿ ಹಿಗ್ಗಿದೆ! ಅಧ್ಯಕ್ಷರಾಗಲು ಅವರು ಒಮ್ಮೆಲೆ ಒಪ್ಪಿದುದಕ್ಕಾಗಿ ಅವರ ಔದಾರ್ಯವನ್ನು, ಕರ್ನಾಟಕದ ಅಭಿಮಾನವನ್ನು ಕೊಂಡಾಡುತ್ತ ತಿರುಗಿದೆವು.

ಮುಂದೆ ನಾಲ್ಕು ದಿನಗಳಲ್ಲಿ ವಾರ್ಷಿಕ ಸಭೆ ಜರುಗಿತು. ಅಧ್ಯಕ್ಷರ ಆಯ್ಕೆಯ ವಿಷಯ ಸಭೆಯ ಮುಂದೆ ಬಂದಿತು. 'ಬರುವ ವರುಷ ನ್ಯಾಯಮೂರ್ತಿ ಲೋಕೂರ ನಾರಾಯಣರಾಯರು ಸಂಘದ ಅಧ್ಯಕ್ಷರಾಗಬೇಕೆಂದು' ಆಗಿನ ಸಭಾಧ್ಯಕ್ಷ ಜೋಶಿಯವರು ಔಪಚಾರಿಕವಾಗಿ ಸೂಚಿಸಿದೊಡನೆ ಎಲ್ಲ ಸಭಿಕರು ಆನಂದ, ವಿಸ್ಮಯಗಳಿಂದ ಕೂಡಿದವರಾಗಿ ಒಬ್ಬರನ್ನೊಬ್ಬರು ಗೆಲುವೊಗದಿಂದ ನೋಡಿ, ಗಟ್ಟಿಯಾಗಿ ಚಪ್ಪಾಳಿ ತಟ್ಟಿದರು. 'ಲೋಕೂರರು ಈ ಸಂಘದ ಅಧ್ಯಕ್ಷರು!' ಎಂಬ ಸಂಗತಿ ಎಲ್ಲರಿಗೂ ತಿಳಿದು ಎಲ್ಲರಲ್ಲಿಯೂ ಒಂದು ಬಗೆಯ ಸ್ಫೂರ್ತಿಯನ್ನು ಹುಟ್ಟಿಸಿತು. ಅಂದು ಹುಟ್ಟಿದ ಆ ಸ್ಫೂರ್ತಿಯು ಕರ್ನಾಟಕ ಸಂಘದ ಸದಸ್ಯರಲ್ಲಿ ವಿಶೇಷತಃ ಕಾರ್ಯಕರ್ತರಲ್ಲಿ ಸ್ಥಿರವಾಗಿ ನೆಲಸಿ ಸಂಘದ ಬಹುಮುಖ ಕಾರ್ಯಗಳು ಸುಗಮವಾಗಿ ಸಾಗಿ ಕರ್ನಾಟಕ ಸಂಘಕ್ಕೆ ಇಂದು ಒಂದು ಸ್ಥಾನವನ್ನು ಕಲ್ಪಿಸಿಕೊಟ್ಟಿದೆ. ನ್ಯಾಯಮೂರ್ತಿಗಳು ಮುಂಬಯಿಯನ್ನು ಬಿಟ್ಟು ಹೋಗಬೇಕಾಗಿ ಬಂದಿದೆ. ಬರುವ ವರ್ಷ ಸಂಘದ ಅಧ್ಯಕ್ಷಸ್ಥಾನಕ್ಕೆ ಇನ್ನೊಬ್ಬ ಸದ್ಗೃಹಸ್ಥರನ್ನು ನಿಯೋಜಿಸುವದು ಕ್ರಮಪ್ರಾಪ್ತವಾದದ್ದು. ಆದರೂ ಕೂಡ ಲೋಕೂರವರಿಂದ ಸಂಘದಲ್ಲಿ ಉಂಟಾಗಿರುವ ಶಕ್ತಿ ಮತ್ತು ಕಾರ್ಯಕರ್ತರಿಗೆ ದೊರೆತ ಸ್ಫೂರ್ತಿ ಇವು ಮಾತ್ರ ಹೆಚ್ಚುತ್ತಲೇ ಹೋಗುವವೆಂಬದರಲ್ಲಿ ಎಳ್ಳಷ್ಟು ಸಂಶಯವಿಲ್ಲ.

## ಸಂಘದ ಕಾರ್ಯದಲ್ಲಿ ಆಸ್ಥೆ ಮತ್ತು ಉತ್ಸಾಹ

ನ್ಯಾಯಮೂರ್ತಿಗಳನ್ನು ಬೀಳ್ಕೊಡುವದಕ್ಕಾಗಿ ಸಂಘದ ಕಾರ್ಯಕರ್ತರೆಲ್ಲರು ತಾ. ೧೯—೩—೧೯೪೭ನೇ ದಿನ ಒಂದು ಸಂತೋಷಕೂಟವನ್ನೇರ್ಪಡಿಸಿದ್ದರು. ಆ ಸುಪ್ರಸಂಗದಲ್ಲಿ ರಾಯರ ಹೃದಯದಂತರಾಳದೊಳಗಿಂದ ಹೊರಹೊಮ್ಮಿದ ಶಬ್ದಗಳಿವು. 'ಇದು ಬೀಳ್ಕೊಡುವ ಸಮಾರಂಭವೆಂದು ನಾನು ತಿಳಿದಿಲ್ಲ. ನಾನು ಸಂಘದ ಆಜೀವ ಸದಸ್ಯನಿದ್ದೇನೆ. ನಾನು ಮುಂಬಯಿ ಬಿಟ್ಟು ಹೋದರೂ ನಾನು ಸಂಘದ ಸದಸ್ಯನಾಗಿಯೇ ಉಳಿಯುತ್ತೇನೆ. ಪ್ರಾಂತೀಯ ಕೇಂದ್ರದಲ್ಲಿರುವ

ಈ ಸಂಘಕ್ಕೆ ಬಹಳ ಮಹತ್ವವಿದೆ. ಇದು ಕರ್ನಾಟಕದ ಸಮಸ್ಯೆಗಳನ್ನು ಬಿಡಿಸಲು ಅರ್ಹವಾದದ್ದಿದೆ. ಯೋಗ್ಯ ದಿಶೆಯಲ್ಲಿ ಕಾರ್ಯಗಳು ನಡೆದರೆ ಇಡಿಯ ಕರ್ನಾಟಕಕ್ಕೆ ಆದರ್ಶ ಸಂಸ್ಥೆಯಾಗುವದರಲ್ಲಿ ಸಂದೇಹವಿಲ್ಲ.

ಈ ನಾಲ್ಕು ವರ್ಷಗಳಲ್ಲಿ ನಾನು ಮಾಡಬೇಕೆಂದು ಗೊತ್ತು ಮಾಡಿಕೊಂಡಷ್ಟು ಕೆಲಸವನ್ನು ಸಂಘಕ್ಕಾಗಿ ಮಾಡಲಾಗಲಿಲ್ಲವೆಂದು ನನಗೆ ಹಳಹಳಿಯಾಗಿದೆ. ಸಂಘದ ಏಳಿಗೆಗಾಗಿ ಇನ್ನು ಮುಂದಾದರೂ ಹೆಣಗುವದು ನನ್ನ ಕರ್ತವ್ಯವೆಂದು ನಾನು ತಿಳಿದಿದ್ದೇನೆ. ಯಾವಾಗ ನನಗೆ ಸಂಘದ ಕರೆ ಬರುವದೋ ಆಗ ಮರು ಗಾಡಿಯಿಂದಲೇ ನಾನು ಇಲ್ಲಿಗೆ ಬರಲು ಸಿದ್ಧನಿರುವೆನೆಂದು ಹೇಳಲು ನನಗೆ ಸಮಾಧಾನ, ಹಾಗೂ ಆನಂದವಾಗುತ್ತಿದೆ' ಈ ಶಬ್ದಗಳನ್ನು ಹೇಳುವಾಗ ಅವರ ಅಂತಃಕರಣ ಉಕ್ಕಿ ಬಂದಿತ್ತು. ಕನ್ನಡಿಗನ ಕೆಚ್ಚು ಹೃದಯವನ್ನು ಅರಿತುಕೊಳ್ಳಲು ಈ ಶಬ್ದಗಳು ಸಾಲವೇ? 'ನಾನು ಸಂಘಕ್ಕಾಗಿ ಹೆಚ್ಚು ಕೆಲಸ ಮಾಡಿಲ್ಲ' ಎಂದು ಹೇಳಿ ತಮ್ಮ ಸೌಜನ್ಯವನ್ನು ತೋರ್ಪಡಿಸಿದರು. ಆದರೆ ಈ ನಾಲ್ಕು ವರ್ಷಗಳಲ್ಲಿ ಸಂಘದ ಕಾರ್ಯದಲ್ಲಿ ಉಂಟಾದ ಪ್ರಗತಿಯೇ ಅವರಿಂದ ಸಲ್ಲಿದ ಸೇವೆಯನ್ನು ಸಾರಿ ಹೇಳುತ್ತದೆ.

'ಇಮಾರತಿಯವರೇ ನಿಮಗೆ ಸಂಘದ ಹುಚ್ಚು ಹಿಡಿದಿದೆ. ಲೋಕೂರವರು ಹೈಕೋರ್ಟಿನ ದೊಡ್ಡ ಹುದ್ದೆದಾರರು. ಅವರಿಗೆ ತುಂಬ ಕೆಲಸಗಳಿರುತ್ತವೆ. ಸಂಘದ ಕೆಲಸಕ್ಕಾಗಿ ಅವರಿಗೆ ಹೆಚ್ಚು ತೊಂದರೆ ಉಂಟಾಗದಂತೆ ನೋಡಿಕೊಳ್ಳಿ' ಎಂದು ನನ್ನ ಕೆಲ ಧೂರ್ತ (?) ಸಂಗಡಿಗರು ವಾರ್ಷಿಕ ಸಾಧಾರಣ ಸಭೆಯ ಮರುದಿನವೇ ನನಗೆ ಎಚ್ಚರಿಕೆ ಕೊಟ್ಟರು. ಓಟದ ಶರ್ಯತ್ತಿನಲ್ಲಿ ಓಡಲು ಅಣಿಯಾದ ಒಬ್ಬ ಓಟ-ಪಟುವನ್ನು ಹಿಂದೆ ಜಗ್ಗಿದಂತಾಯಿತು ನನ್ನ ಸ್ಥಿತಿ ಆಗ. ನನ್ನ ಉತ್ಸಾಹಕ್ಕೆ ಈ ಎಚ್ಚರಿಕೆಯು ತಣ್ಣೀರೆರಚಿದಂತಾಯಿತು. 'ಏನೇ ಆಗಲಿ ಈ ವಿಷಯವನ್ನು ನಾನೇ ವಿಚಾರಿಸಿ ನಿರ್ಣಯಕ್ಕೆ ಬರುವ ಗೊಂದಲದಲ್ಲಿ ಬೀಳುವದಕ್ಕಿಂತ ಲೋಕೂರ ಸಾಹೇಬರನ್ನು ಕಂಡು ಮುಂದೇನಾಗುವುದೊ ನೋಡೋಣ' ಎಂದು ನಿಶ್ಚಯಿಸಿ

ಅವರ ನಿವಾಸಸ್ಥಾನಕ್ಕೆ ಹೊರಟೆ. ಆ ದಿನ ಕಾಣುವುದಕ್ಕೆ ಮೊದಲೇ ಅಪ್ಪಣೆಯನ್ನು ಪಡೆದುಕೊಂಡದ್ದರಿಂದ 'ಈಗ ನನಗೆ ಕೆಲಸವಿದೆ, ಸುತ್ತಾವಾಗಲಾದರೂ ನೋಡಬಹುದು.' ಎಂದು ಅವರಿಂದ ಉತ್ತರ ದೊರೆತು ಹಾಗೇ ಮರಳಿ ಬರಬೇಕಾಗುವದೆಂಬ ಎದೆಗುದಿ ನನಗಿರಲಿಲ್ಲ. ಆದರೂ ಸಾರ್ವಜನಿಕ ಕೆಲಸಕ್ಕಾಗಿ ಅವರ ದೃಷ್ಟಿ ಹೇಗಿದೆ? ಕೆಲಸಗಾರರ ಸಂಗಡ ಮನಬಿಚ್ಚಿ ಮಾತನಾಡುವರೋ ಹೇಗೆ? ಎಂದು ಎಣಿಕೆ ಹಾಕುತ್ತ ನನ್ನ ಸಂಗಡಿಗರ ಎಚ್ಚರಿಕೆಯನ್ನು ಮರೆಯದೆ ಅವರ ಬಂಗಲೆಗೆ ಹೋದೆ. ಕೂಡಲೆ ರಾಯರೇ ಹೊರಗೆ ಬಂದು 'ಬರ್ರಿ ಇವಾರತಿಯವರೇ' ಎಂದು ನನ್ನನ್ನು ಆದರದಿಂದ ಒಳಗೆ ಕರೆದರು. ಆ ವಿಶಾಲವಾದ ದಿವಾಣಖಾನೆಯಲ್ಲಿ ಒಂದು ಸೋಫಾದ ಮೇಲೆ ರಾಯರು ಕುಳಿತರು ಸ್ವಲ್ಪ ದೂರದ ಮತ್ತೊಂದು ಆಸನದ ಮೇಲೆ ನಾನು ಕೂಡಲು ಹೋದೆ. 'ಇಲ್ಲೇ ಬರ್ರಿ' ಎಂದು ನನ್ನನ್ನು ವಾತ್ಸಲ್ಯದಿಂದ ಬಳಿಯಲ್ಲಿ ಕುಳ್ಳಿರಿಸಿದರು. ಈಗಾಗಲೇ ನನ್ನ ಸಂಗಡಿಗರ 'ಎಚ್ಚರಿಕೆ' ಗೊಳ್ಳು ಇರುವದೆಂದು ನನಗೆ ಹೊಳೆದು ಹೋಗಿತ್ತು. 'ಸಂಘದ ವಿಷಯ ತಮ್ಮ ಕೂಡ ಮಾತನಾಡಬೇಕೆಂದು ತಮ್ಮ ಕಡೆ ಬಂದೆ.' ಎಂದು ನಾನು ಮೆಲ್ಲಗೆ ನುಡಿದೆ. 'ನನಗೆ ಅನುಕೂಲವಾಗುವಂತೆ ಮೊದಲೇ ವೇಳೆಯನ್ನು ಗೊತ್ತುಪಡಿಸಿದರೆ ನಾನು ಸಂಘಕ್ಕಾಗಿ ನೀವು ಕರೆದಲ್ಲಿ ಬರುವೆ, ಹೇಳಿದ್ದನ್ನು ಮಾಡುವೆ' ಎಂದು ಒಮ್ಮೆಲೆ ಉತ್ತರ ದೊರೆಯಿತು. ಸಂಘದ ಕಾರ್ಯದಲ್ಲಿ ತನ್ಮಯತೆಯನ್ನು ತಾಳದ ಹೊರತು ಈ ಬಗೆಯ ಶಬ್ದಗಳು ಬರುವುದು ಸಾಧ್ಯವುಂಟೇ? ಅವರ ಆತ್ಮೀಯ ಭಾವನೆಯು ನನ್ನನ್ನು ನಿರುತ್ತರನನ್ನಾಗಿ ಮಾಡಿತು. ಕೆಲವು ನಿಮಿಷ ಹಾಗೂ ಹೀಗೂ ಮಾತು ಮುಗಿಸಿ ಹಿಂದಿರುಗಿದೆ. ಅವರಿಂದ ದೊರೆತ ಈ ಉತ್ತೇಜನದಿಂದ ನಾನು ಉಬ್ಬಿ ಹೋದೆ. ಸಂಘದ ಕಾರ್ಯವನ್ನು ಎಷ್ಟು ಬೇಕಾದರೂ ಮಾಡಬಹುದೆಂದೆನಿಸಿತು.

ಅಂದಿನಿಂದ ಇಂದಿನ ವರೆಗೆ ಲೋಕೂರವರು ಸಂಘದ ಕಾರ್ಯದಲ್ಲಿ ಒಂದೇ ಸವನೆ ಆಸ್ಥೆ ತೋರಿದ್ದಾರೆ. ಆಡಳಿತ ಸಮಿತಿಯ ಸಭೆ,

ವಾರ್ಷಿಕ ಸಭೆ- ಇಲ್ಲವೆ ಇತರ ಕಾರ್ಯಕ್ರಮಗಳಿಗೆ ರಾಯರು ವೇಳೆಗೆ ಸರಿಯಾಗಿ ಬರುತ್ತಿದ್ದರು. ಸಭೆಯಲ್ಲಿ ಚರ್ಚಿಸಲಾಗುವ ವಿಷಯಗಳ ಬಗ್ಗೆ ತಮ್ಮ ನಿರ್ಣಯಗಳನ್ನು ಸಮಂಜಸವಾಗಿ ಕೊಡುತ್ತಿದ್ದರು. ಎಂತೆಂತಹ ಜಟಿಲ ಪ್ರಶ್ನೆಗಳನ್ನೊಳಗೊಂಡ ವಿಷಯಗಳ ಮೇಲೂ ನ್ಯಾಯಸಮ್ಮತವಾದ ತೀರ್ಪು ಕೊಡುವವರಿಗೆ ಈ ವಿಷಯಗಳೆಂದರೆ ಮಕ್ಕಳಾಟದಂತಲ್ಲವೇ? ಸಭೆಯ ಕೆಲಸವು ಮುಗಿಯುವ ಮುಂಚೆ ಅವರೆಂದೂ ಸಭೆಯನ್ನು ಬಿಟ್ಟು ಹೋಗುತ್ತಿರಲಿಲ್ಲ. ಉತ್ಸವದ ಕಾರ್ಯಕ್ರಮಗಳಲ್ಲಂತೂ ಕೊನೆಯ ವರೆಗೂ ಕುಳಿತು ಅಂದಿನ ಉತ್ಸವದಲ್ಲಿ ಭಾಗವಹಿಸಿದವರಿಗೆಲ್ಲ ಹುರುಪುಗೊಡುತ್ತಿದ್ದರು. ವೇಳೆಗೆ ಸರಿಯಾಗಿ ದಿನದ ಕೆಲಸಗಳನ್ನು ತಪ್ಪದೆ ಮಾಡಿ ನಿಯಮಿತತನವನ್ನು ವೈಗೂಡಿಸಿಕೊಂಡ ಅವರಿಗೆ, ಸಭೆ ಮುಂತಾದುವುಗಳಿಗೆ ನಿರ್ದಿಷ್ಟ ವೇಳೆಯನ್ನು ಗಡಿಯಾಳದ ಮುಳ್ಳುಗಳು ತೋರಿಸುವಾಗ್ಗೆ ಸ್ವಲ್ಪವೂ ಅಲುಗಾಡದಂತೆ ಬರುವದು ಅಷ್ಟೇನೂ ಸೋಜಿಗದ ಸಂಗತಿಯಲ್ಲ. ಆದರೆ ನಿಯಮಿತತನವನ್ನು ವೈಗೂಡಿಸಿಕೊಳ್ಳುವದು ಮಾತ್ರ ಅಸಾಮಾನ್ಯ ವ್ಯಕ್ತಿಗಳಿಗೇ ಸಾಧ್ಯ.

ಸಂಘದ ವಾಚನಾಲಯಕ್ಕಾಗಿ ಇಲ್ಲಿಯ ಪೌರಸಭೆಗೆ ಗ್ರ್ಯಾಂಟಿನ ಬಗ್ಗೆ ಅರ್ಜಿಕೊಡಬೇಕೆಂದು ಗೊತ್ತಾಯಿತು. 'ಆ ಅರ್ಜಿಯನ್ನು ನನ್ನ ಕಡೆಗೆ ಕೊಡಿರಿ. ಅದನ್ನು ನಾನೇ ಮುನಿಸಿಪಲ್ ಕಮಿಶನರರಾದ ಶ್ರೀ. ಭಿಡೆಯವರಿಗೆ ಮುಟ್ಟಿಸುತ್ತೇನೆ' ಎಂದು ರಾಯರು ನನಗೆ ತಿಳಿಸಿದರು. ಒಂದು ಸಲ ರಾಯರು ನನಗೆ ಟೆಲಿಫೋನಿನಲ್ಲಿ ಹೀಗೆ ಹೇಳಿದರು. 'ನಮ್ಮಲ್ಲಿ ಬೆಂಗಳೂರಿನ ಶ್ರೀ. ನಾರಾಯಣರಾವ ನಾಯಿಕ ಇವರು ಬಂದಿದ್ದಾರೆ. ನಾಳೆ ಅವರನ್ನು ಸಂಘಕ್ಕೆ ಕರೆದುಕೊಂಡು ಬರುತ್ತೇನೆ. ಅವರನ್ನು ಸಂಘದ ಪೋಷಕ ವರ್ಗದ ಸದಸ್ಯರನ್ನಾಗಿ ಮಾಡೋಣ'. ರಾಯರ ಹೆಸರೇ ಸಂಘದ ಸದಸ್ಯರ ಸಂಖ್ಯೆಯನ್ನು ಬಹುವಾಗಿ ಬೆಳೆಸಿತು. ಅವರೂ ಸ್ವತಃ ಕೂಡ ಸಂಘಕ್ಕೆ ಸದಸ್ಯರನ್ನು ದೊರಕಿಸಿ ಕೊಡುವ ಸಂದರ್ಭಗಳನ್ನು ಚನ್ನಾಗಿ ಉಪಯೋಗಿಸಲು ಹಿಂದು ಮುಂದು ನೋಡುತ್ತಿದ್ದಿಲ್ಲ. ಅವರ ದೊಡ್ಡ ಹುದ್ದೆಯೂ, ಸಿರಿವಂತಿ

ಕೆಯೂ ಇಂತಹ ಸಾಮಾಜಿಕ ಕಾರ್ಯಗಳನ್ನು ಮಾಡುವಾಗ ಅಡ್ಡಬರುತ್ತಿದ್ದಿಲ್ಲ. ಮುಂಬಯಿ ಸರಕಾರದ ಹೋಮ ಮೆಂಬರರಾದ ಶ್ರೀ. ಎಚ್. ವಿ. ಆರ್. ಐಯಂಗಾರರನ್ನು ನಮ್ಮ ಸಂಘಕ್ಕೆ ಸದಸ್ಯರನ್ನಾಗಿ ಮಾಡಬೇಕಾಗಿದೆಯೆಂದು ಒಮ್ಮೆ ನಾನು ಅವರೆದುರು ಪ್ರಸ್ತಾಪಿಸಿದೆ. 'ನಡೆಯಿರಿ ಹೋಗೋಣ. ಅವರನ್ನು ಸದಸ್ಯರನ್ನಾಗಿ ಮಾಡೋಣ' ವೆಂದು ಒಬ್ಬ ಸಾಮಾನ್ಯ ಕೆಲಸಗಾರನಂತೆ ಒಪ್ಪಿಕೊಂಡರು.

ಸಂಘದ ಕಚೇರಿಯು ಒಂದು ಚಿಕ್ಕ ಕೋಣೆಯಲ್ಲಿದೆ. ಅದೂ ಒಂಪನೇ ಮಾಳಿಗೆಯ ಮೇಲೆ. ಆ ಸ್ಥಳಕ್ಕೆ ಹೋಗಬೇಕಾದರೆ ಇಕ್ಕಟ್ಟಾದ ಮೆಟ್ಟಲುಗಳುಂಟು. ಇಂಥಲ್ಲಿಯೇ ಎಡವುತ್ತ ಮುಗ್ಗರಿಸುತ್ತ ನ್ಯಾಯಮೂರ್ತಿಗಳು ಬರುತ್ತಿದ್ದರು. ಇಂತಹ ಸ್ಥಳಕ್ಕೆ 'ಬರಬೇಕೆ?' ಎಂಬ ಭಾವನೆಯು ಅವರಲ್ಲಿ ಎಂದೂ ಕಂಡುಬರಲಿಲ್ಲ. ಜಾಗೆ ಸರಿಯಾಗಿಲ್ಲವೆಂಬುದನ್ನು ಒಂದು ಸಲ ಅವರು ಹೀಗೆ ತಿಳಿಯಪಡಿಸಿದರು. ಕೀರ್ತಿಶೇಷ ಶ್ರೀಕಂಠಯ್ಯನವರನ್ನು ಸಂಘಕ್ಕೆ ಕರೆತರುವಾಗ 'ನಿಮ್ಮನ್ನು ಇಂಥ ಸ್ಥಳಕ್ಕೆ ಕರಕೊಂಡು ಹೋಗುವುದಕ್ಕೆ ನಮಗೆ ನಾಚಿಕೆಯಾಗುತ್ತದೆ' ಎಂಬ ಉದ್ಗಾರ ನ್ಯಾಯಮೂರ್ತಿಗಳ ಬಾಯಿಯಿಂದ ಹೊರಟಿತು. ಇಂತಹ ಸ್ಥಳದಲ್ಲಿ ಅವರು ಐದು ವರ್ಷಗಳ ಕಾಲ ಸಭೆಗೆ ತಪ್ಪದೆ ಬರುತ್ತಿದ್ದರು. ಸಂಘದ ಕೆಲಸಗಳನ್ನು ಮಾಡುವಾಗ ಸ್ಥಳ ಚಿಕ್ಕದು, ವ್ಯಕ್ತಿ ಚಿಕ್ಕದು, ಕೆಲಸ ಚಿಕ್ಕದು ಎಂಬ ವಿಚಾರಗಳು ಅವರ ಮನಸಿನಲ್ಲಿ ಸುಳಿಯುತ್ತಿರಲಿಲ್ಲ. ತಾನು ದೊಡ್ಡವನೆಂಬ ಅಹಂಕಾರಕ್ಕೆ ಬಲಿಬಿದ್ದ ವ್ಯಕ್ತಿಗಳೇ ಅಲ್ಲವೆ ಈ 'ಚಿಕ್ಕ - ದೊಡ್ಡ' ಭಾವನೆಗಳ ತಾಕಲಾಟಕ್ಕೆ ಸಿಕ್ಕುವವರು?

ಐದು ವರ್ಷಗಳಲ್ಲಿ ಸಂಘದ ಕೆಲಸಕ್ಕಾಗಿ ಅದೆಷ್ಟೋ ಸಲ ನ್ಯಾಯಮೂರ್ತಿಗಳ ಕಡೆ ನಾನು ಹೋದೆ. ಕೆಲವು ಬಾರಿ ಹೈಕೋರ್ಟಿನ ಅವರ ಚೇಂಬರದಲ್ಲಿ, ಕೆಲವು ಬಾರಿ ಅವರ ನಿವಾಸಸ್ಥಾನದಲ್ಲಿ, ಅವರನ್ನು ಕಂಡೆ. ಬಹಳ ಸಲ ಮೊದಲು ಬರುವೆನೆಂದು ತಿಳಿಸದೆ ಹಾಗೆಯೇ ಹೋದರೂ ಹೊರಗೆ ಭೆಟ್ಟಿಗಾಗಿ ಕಾಯಬೇಕಾಗುತ್ತಿರಲಿಲ್ಲ. ಭೆಟ್ಟಿಯಾದ ಬಳಿಕ ನನ್ನ ಕೆಲಸವನ್ನು ಮುಗಿಸದೆ ಒಮ್ಮೆಯಾದರೂ

ಮರಳಿ ಬರಲಿಲ್ಲ. ಯಾವಾಗ್ಗೆ ಭೆಟ್ಟಿಯಾದರೂ ಆದರದ ಸ್ವಾಗತ. ಅವರ ಮುಂದಿಟ್ಟ ವಿಷಯಗಳನ್ನು ಕೂಡಲೇ ಗ್ರಹಿಸಿ ತಮ್ಮ ಪ್ರಾಮಾಣಿಕ ಅಭಿಪ್ರಾಯವನ್ನು ಹೇಳಿಬಿಡುತ್ತಿದ್ದರು. ಬೇಸರಪಟ್ಟಂಥ ಹಾಗೂ ಸಿಟ್ಟಿಗೆದ್ದ ಅವರ ಮೋರೆಯನ್ನು ನಾನು ಒಮ್ಮೆಯಾದರೂ ಕಾಣಲಿಲ್ಲ. ಹಾಗೆ ಕಂಡವರು ಯಾರೂ ಇಲ್ಲವೆಂದು ನನಗೆ ಗೊತ್ತಿದ್ದ ಮಟ್ಟಿಗೆ ಹೇಳಬಲ್ಲೆ. ಅವರ ಕುಟುಂಬದ ಜನರಲ್ಲಿ ಒಬ್ಬಿಬ್ಬರನ್ನು ಈ ವಿಷಯವಾಗಿ ವಿಚಾರಿಸಿದೆ. ಅವರದೂ ಅದೇ ಬಗೆಯ ಅನುಭವ.

ಸಂಘದ ಕೆಲಸಗಾರರನ್ನು ಆದರಿಸುವುದು, ಗೌರವಿಸುವುದು ಇವರ ಸ್ವಭಾವ. ಎಲ್ಲ ಕಾರ್ಯಕರ್ತರನ್ನು ತಮ್ಮ ನಿವಾಸಸ್ಥಾನಕ್ಕೆ ಸಂತೋಷಕೂಟಕ್ಕಾಗಿ ಆಮಂತ್ರಿಸುತ್ತಿದ್ದರು. ಆಗಂತೂ ಎಲ್ಲರ ಕೂಡ ಸಲಿಗೆಯಿಂದ, ಮಮತೆಯಿಂದ ನಡೆದುಕೊಳ್ಳುತ್ತಿದ್ದರು. ಕೆಲವು ಸಲ ತಿಂಡಿತಿನಸುಗಳನ್ನು ಎಲ್ಲರಿಗೂ ಪ್ರೀತಿಯಿಂದ ತಾವೇ ಬಡಿಸುತ್ತಿದ್ದರು. 'ನೀವು ಕೆಲಸ ಹೆಚ್ಚು ಮಾಡುತ್ತಿದ್ದೀರಿ. ಆದುದರಿಂದ ನೀವು ಇಷ್ಟು ಜಿಲೇಬಿಗಳನ್ನು ತಿನ್ನಲೇ ಬೇಕು' ಎಂದು ಎಲ್ಲರ ಕೂಡ ನಗೆಯಾಡುವರು. 'ಅತಿಥಿಗಳು ಸಂಕೋಚಪಟ್ಟುಕೊಳ್ಳಬಾರದು; ಅವರು ತೃಪ್ತಿಹೊಂದುವಷ್ಟು ತಿನ್ನಬೇಕು' ಎಂಬ ಕನ್ನಡಿಗರ ದೊಡ್ಡ ಮನಸ್ಸು, ತೆರೆದ ಹೃದಯಗಳನ್ನು ಲೋಕೂರವರಲ್ಲಿ ಯಾವಾಗಲೂ ಕಾಣಬಹುದು. ಸಮಾಜದ ದೊಡ್ಡ ಅಂತಸ್ತನ್ನೇರಿದ ಅವರಲ್ಲಿ ಈ ಗುಣಗಳಿರುವುದು, ಗಂಗೆ ಯಮುನೆಗಳ ಸಂಗಮದಂತೆ.

## ಸಹಕಾರಿ ಚಳುವಳಿಯಲ್ಲಿ ಮಾಡಿದ ಕಾರ್ಯ

೧೯೪೭ನೆ ಇಸ್ವಿಯಲ್ಲಿ ಬೆಳಗಾಂವಿ ಡಿಸ್ಟ್ರಿಕ್ಟ ಸೆಂಟ್ರಲ್ ಬ್ಯಾಂಕಿನ ಬೆಳ್ಳಿಯ ಹಬ್ಬವನ್ನು ಆಚರಿಸಲಾಯಿತು. ಈ ಹಬ್ಬಕ್ಕೆ ಮುಂಚಿತವಾಗಿ ಬ್ಯಾಂಕಿನ ಚೇರಮನ್ನರಾದ ಶ್ರೀ. ಪಿ. ಬಿ. ಉಗರಗೋಳ ಅವರು ನನ್ನ ಬಳಿ ಬಂದು 'ನಾನು ಲೋಕೂರಸಾಹೇಬರನ್ನು ಕಾಣಬೇಕಾಗಿದೆ. ನೀವು ಬರುವಿರಾ' ಎಂದು ನನ್ನನ್ನು ಕೇಳಿದರು. ಭೆಟ್ಟಿಯ ಕಾರಣವನ್ನು ಕೇಳಲಾಗಿ ಆ ಬ್ಯಾಂಕಿನ ಸ್ಥಾಪನೆಗೆ ಶ್ರೀ. ನ್ಯಾಯ

ಮೂರ್ತಿಗಳೇ ಕಾರಣವೆಂಬುದು ತಿಳಿದುಬಂತು. ಸಹಕಾರಿ ಚಳುವಳಿ ಯಲ್ಲಿಯೂ ಲೋಕೂರವರ ಕೈವಾಡವಿದೆಯೆಂಬುದು ನನ್ನ ಕುತೂಹಲ ವನ್ನು ಕೆರಳಿಸಿತು. ಈ ವಿಷಯವಾಗಿ ಹೆಚ್ಚು ಸಂಗತಿಗಳನ್ನು ತಿಳಿದು ಕೊಳ್ಳಲು ಯತ್ನಿಸಿದೆ.

ನ್ಯಾಯಮೂರ್ತಿ ಲೋಕೂರವರು ೧೯೦೭ನೇ ಇಸ್ವಿಯಲ್ಲಿ ಬೆಳ ಗಾಂವಿಯಲ್ಲಿ ವಕೀಲಿ ವ್ಯವಸಾಯವನ್ನು ಪ್ರಾರಂಭಿಸಿದರು. ಆಗ ಇವರ ವಯಸ್ಸು ೨೦ ವರುಷ ಮಾತ್ರ. ವಕೀಲಿಯ ಜೊತೆಗೆ ರಾಯರು ಸಾರ್ವಜನಿಕ ಕಾರ್ಯದಲ್ಲಿ ಅಷ್ಟು ಚಿಕ್ಕ ವಯಸ್ಸಿನಲ್ಲಿಯೇ ಲಕ್ಷ್ಯ ಹಾಕ ಹತ್ತಿದರು. ಹರಿತವಾದ ಬುದ್ಧಿಗೆ ವಿಷಯಗಳನ್ನು ತಿಳಿಯಲು ಹೆಚ್ಚು ವೇಳೆ ಬೇಕೆ? ಆ ವೇಳೆಗೆ ಸಹಕಾರೀ ತತ್ವಗಳು ನಮ್ಮ ದೇಶಕ್ಕೆ ತೀರ ಹೊಸವಾಗಿದ್ದವು. ಅಲ್ಲಲ್ಲಿ ಅವುಗಳ ಪ್ರಸಾರ ನಡೆದಿತ್ತು. ಹೊಸ ವಿಷಯಗಳನ್ನು ಅರಗಿಸಿಕೊಂಡು, ಅವುಗಳಲ್ಲಿ ಉಪಯುಕ್ತವಾದವು ಗಳನ್ನು ಆಚರಣೆಯಲ್ಲಿ ತರುವಂಥ ಬಿಕ್ಕಟ್ಟಿನ ಕೆಲಸವನ್ನು ರಾಯರು ಆ ಅನನುಭವಿಕ ವಯಸ್ಸಿನಲ್ಲಿಯೇ ಪ್ರಾರಂಭಿಸಿದರು. ರಾಯರಲ್ಲಿಯ ವಿಷಯಗ್ರಹಣಶಕ್ತಿ, ಪ್ರಾಮಾಣಿಕತನ, ನಿರ್ಭಯತೆ ಇವುಗಳಿಗಾಗಿ ಅವರು ೧೯೧೦ನೇ ಇಸ್ವಿಯಲ್ಲಿ ಬೆಳಗಾವ ಪಾಯೋನಿಯರ ಅರ್ಬನ್ ಕೋಅಪರೇಟಿವ್ ಸೊಸಾಯಿಟಿಯ ಚೇರಮನ್ನರಾಗಿ ಆರಿಸಲ್ಪಟ್ಟರು. ಆಗಿನಿಂದ ೧೯೧೮ನೆ ಇಸ್ವಿಯಲ್ಲಿ ಸರಕಾರಿ ಕೆಲಸವನ್ನು ಕೈಕೊಳ್ಳುವ ವರೆಗೆ ಅವರು ಅದರ ಚೇರಮನ್ನರಾಗಿ ಕೆಲಸ ಮಾಡಿದರು. ಇವರ ಯೋಗ್ಯ ಮಾರ್ಗದರ್ಶನದ ಫಲವಾಗಿ ಆ ಸೊಸಾಯಿಟಿಯು ಬೆಳೆದು ಸಹಕಾರಿ ಅರ್ಬನ್ ಬ್ಯಾಂಕಿನ ಮಟ್ಟಕ್ಕೆ ಆಗಲೇ ಬೆಳೆಯಿತು.

ರಾಯರು ಸಹಕಾರೀ ತತ್ವವನ್ನು ಚೆನ್ನಾಗಿ ಅಭ್ಯಾಸ ಮಾಡಿದರು. ೧೯೧೦ನೇ ಇಸ್ವಿಯಿಂದ ೧೯೧೮ರ ವರೆಗೆ ಜರುಗಿದ ಎಲ್ಲ ಸಹಕಾರೀ ಪರಿಷತ್ತುಗಳಿಗೆ ಹೋಗುತ್ತಿದ್ದರು. ಪ್ರತಿ ಪರಿಷತ್ತಿನಲ್ಲಿ ಸಹಕಾರಿ ತತ್ವಗಳ ಬಗ್ಗೆ ಬೇರೆ ಬೇರೆ ಪ್ರಬಂಧಗಳನ್ನೋದುತ್ತಿದ್ದರು. ಹೀಗೆ ಇವರು ಓದಿದ ಪ್ರಬಂಧಗಳಲ್ಲಿ 'ಡಿಸ್ಟ್ರಿಕ್ಟ ಸೆಂಟ್ರಲ್ ಬ್ಯಾಂಕ್ಸ' ಈ ವಿಷಯದ ಮೇಲಿನ ಇವರ ಪ್ರಬಂಧವು ಅತ್ಯುತ್ತಮವಾಗಿದ್ದುದರಿಂದ ಆಗಿನ ರಜಿಸ್ಟ್ರಾರರಾದ

ವಿ. ಯುಬ್ಯಾಂಕರವರು ಇದನ್ನು ಮುಕ್ತಕಂಠದಿಂದ ಪ್ರಶಂಸಿಸಿದರು.

ಡಿಸ್ಟ್ರಿಕ್ಟ ಸೆಂಟ್ರಲ್ ಬ್ಯಾಂಕಿನ ತಮ್ಮ ಯೋಜನೆಯನ್ನು ಕಾರ್ಯ ರೂಪದಲ್ಲಿ ತರಲು ರಾಯರು ನಿಶ್ಚಯಿಸಿದರು. ರಜಿಸ್ಟ್ರಾರರಿಂದ ಈ ಕಾರ್ಯಕ್ಕೆ ಉತ್ತೇಜನವಂತು ಮೊದಲೇ ದೊರೆತಿತ್ತು. ಸಾಕಷ್ಟು ಶೇರುಹಣವನ್ನು ಶೇಖರಿಸಿದರು. ತೀರ ಅಪರಿಚಿತವಾದ ಈ ಕಾರ್ಯದ ಹೊಣೆಯನ್ನು, ರಾಯರನ್ನು ಬಿಟ್ಟು ಯಾರು ವಹಿಸಬೇಕು? ಹೊರಡಿಸಬೇಕೆಂದಿರುವ ಈ ಬ್ಯಾಂಕಿಗೆ ರಾಯರೇ ಚೇರಮನ್ನರಾಗಿ ಆರಿಸಲ್ಪಟ್ಟರು. ಬ್ಯಾಂಕು ಪ್ರಾರಂಭವಾಗುವದಕ್ಕೆ ಇನ್ನು ಸ್ವಲ್ಪೇ ಅವಧಿ ಉಳಿದಿತ್ತು. ಅಷ್ಟರಲ್ಲಿ ರಾಯರು ಸರಕಾರೀ ಕೆಲಸವನ್ನು ಹಿಡಿದದ್ದರಿಂದ ಆ ಕಾರ್ಯವನ್ನು ಇವರೇ ಮುಂದುವರಿಸಲಿಕ್ಕಾಗಲಿಲ್ಲ. ಅಂತೂ ಬೆಳಗಾಂವ ಜಿಲ್ಹಾ ಸೆಂಟ್ರಲ್ ಬ್ಯಾಂಕಿನ ಹೊಳವನ್ನು ರಾಯರೇ ಹಾಕಿದರು. ತಳ ಸೋಸಿ ಮನೆಕಟ್ಟಬೇಕೆಂಬ ಗಾದೆಯಂತೆ ಈ ಬ್ಯಾಂಕಿನ ತಳವನ್ನು ರಾಯರು ಚನ್ನಾಗಿ ಸೋಸಿ ಭದ್ರಮಾಡಿದರು. ಅದರ ಮೇಲೆ ಕಟ್ಟಡ ಬೆಳೆದು ಬ್ಯಾಂಕಿನ ರೂಪದಿಂದ ಗಟ್ಟಿಮುಟ್ಟಾಗಿ ನಿಂತಿದೆ. ಈ ಬ್ಯಾಂಕು ಇಪ್ಪತ್ತೈದು ವರ್ಷ ಉಪಯುಕ್ತ ರೀತಿಯಲ್ಲಿ ಬೆಳಗಾವಿ ಜಿಲ್ಹೆಯ ಒಕ್ಕಲಿಗರಿಗೆ ಅಗತ್ಯದ ಸೇವೆಸಲ್ಲಿಸಿ, ವ್ಯವಹಾರಸ್ಥರಿಗೆ ಅನುಕೂಲತೆಗಳನ್ನೊದಗಿಸಿ, ಸಹಕಾರೀ ಚಳುವಳಿಯ ಮೂರ್ತಿಮಂತ ಕುರುಹಾಗಿ ನಿಂತಿದೆ. ಈ ಬ್ಯಾಂಕಿನ ಬೆಳ್ಳಿಹಬ್ಬದಿಂದ ರಾಯರಿಗೆ ಆದಷ್ಟು ಆನಂದವು ಅನ್ಯರಿಗೆ ಆಗಲಾರದು. ಕೂಸು ಬೆಳೆದು ಮಹತ್ಕಾರ್ಯಗಳನ್ನು ಮಾಡುವುದನ್ನು ನೋಡಿ ನಲಿಯುವವರು ತಂದೆತಾಯಿಗಳ ಹಾಗೆ ಇನ್ನಾರಾದರೂ ಇರುವರೊ? ಈ ಬೆಳ್ಳಿಯ ಹಬ್ಬಕ್ಕೆ ರಾಯರು ಕಳುಹಿಸಿದ ಸಂದೇಶದಲ್ಲಿ ಈ ವಾಕ್ಯವಿದೆ. "ಅಂದು ನಾನು ನೆಟ್ಟ ಗಿಡವು ಇಂದು ದೊಡ್ಡದಾಗಿ ಫಲಗಳನ್ನು ಕೊಡುತ್ತಿರುವುದನ್ನು ನೋಡಿ ನನಗಾದ ಆನಂದವು ಅನುಭವದಿಂದಲೇ ತಿಳಿಯತಕ್ಕದ್ದು...." ಈ ಒಂದು ವಾಕ್ಯದಲ್ಲಿ ರಾಯರ ಮತ್ತು ಬ್ಯಾಂಕಿನ ಸಂಬಂಧವು ಒಡೆದು ಕಾಣುತ್ತಿದೆ.

ಚಿಕ್ಕ ವಯಸ್ಸಿನಲ್ಲಿ, ಸ್ವಲ್ಪ ಅವಧಿಯಲ್ಲಿ, ಹೊಚ್ಚ ಹೊಸ

ವಿಷಯಗಳನ್ನು ಕೈಕೊಂಡು ರಾಯರು ಅಗ್ರಗಾಮಿಗಳಾಗಿ ಕೆಲಸ ಮಾಡಿ ಸಹಕಾರೀ ಚಳುವಳಿಯಲ್ಲಿಯೂ ಒಂದು ಸ್ಥಾನಗಳಿಸಿದ್ದಾರೆ.

## ಸಾಮಾಜಿಕ ಕಾರ್ಯಗಳಲ್ಲಿ ಒಲವು

'ಬೀಜಕ್ಕೆ ಬಿಡುವ ಕಾಯಿಯನ್ನು ಹೀಚಿನಲ್ಲಿ ನೋಡು' ಎಂಬ ನಾಣ್ಣುಡಿಗನುಸಾರವಾಗಿ ಲೋಕೂರರವರ ಮೇಧಾಶಕ್ತಿಯು ಚಿಕ್ಕ ವಯಸ್ಸಿನಲ್ಲಿಯೇ ತನ್ನ ಪ್ರಭಾವವನ್ನು ಬೀರತೊಡಗಿತು. ಶಿಕ್ಷಣ ಮುಗಿದೊಡನೆಯೇ ವಕೀಲಿ ವ್ಯವಸಾಯ ಪ್ರಾರಂಭವಾಯಿತು. ಆಗಿನಿಂದಲೇ ಸಾಮಾಜಿಕ ಕೆಲಸವನ್ನು ಕೈಕೊಂಡು ಜನತೆಯ ಸೇವೆ ಮಾಡಹತ್ತಿದರು. ಬೆಳಗಾಂವಿಯ ಪೌರಸಭೆಯ ಸದಸ್ಯರೆಂದು ಇವರ ಆಯ್ಕೆಯಾಯಿತು. ಈ ದಿಶೆಯಲ್ಲಿ ಇನ್ನೂ ಕೆಲಸ ನಡೆಯಬೇಕೆಂದಿರುವಾಗ ಜಿಲ್ಹಾ ಅಸಿಸ್ಟಂಟ ನ್ಯಾಯಾಧೀಶರೆಂದು ಇವರ ನೇಮಕವಾದದ್ದರಿಂದ ಆ ಕೆಲಸ ಅಷ್ಟಕ್ಕೆ ನಿಂತಿತು.

ಅಖಿಲ ಭಾರತ ಕಾಂಗ್ರೆಸ್ಸಿನ ಹೆಸರು ಈಗ ಕೋಳಿ ಕೂಗಿದ ಎಲ್ಲ ಹಳ್ಳಿಗಳಲ್ಲಿಯೂ ಕೇಳಬರುತ್ತದೆ. ಈಗ್ಗೆ ೩೦ ವರ್ಷಗಳ ಹಿಂದೆ ಈ ಚಳುವಳಿ ಅಷ್ಟು ಜೋರಾಗಿ ನಡೆದಿರಲಿಲ್ಲ. ಆಗ ಸ್ವಾತಂತ್ರ್ಯಯುದ್ಧದ ಮಹತ್ವವನ್ನರಿತಿದ್ದವರು ತೀರ ವಿರಳವಾಗಿದ್ದರು. ಇಂಥ ಚಳುವಳಿಯಲ್ಲಿ ಭಾಗವಹಿಸುವದಕ್ಕೆ ಅಖಂಡವಾದ ಧೈರ್ಯ, ಅತುಲವಾದ ಸಾಹಸ, ಸ್ವಾರ್ಥತ್ಯಾಗ ಬೇಕಾಗುತ್ತಿದ್ದವು. ಕೇವಲ ಮುಂಧೋರಣವುಳ್ಳವರು ಮಾತ್ರ ಈ ಕಾರ್ಯದಲ್ಲಿ ಭಾಗವಹಿಸುತ್ತಿದ್ದರು. ಈ ಕಾರ್ಯಕ್ಕೆ ಲೋಕೂರರವರ ಲಕ್ಷ್ಯ ತಿರುಗದೆ ಇರಲಿಲ್ಲ. ಕಾಂಗ್ರೆಸ ಸದಸ್ಯರಾದರು. ಕಾಂಗ್ರೆಸ ಅಧಿವೇಶನಗಳಿಗೆ ಹೋಗಿಬರುತ್ತಿದ್ದರು. ಒಂದು ವೇಳೆ ಸರಕಾರೀ ಕೆಲಸವನ್ನು ಹಿಡಿಯದಿದ್ದರೆ ಈ ಸ್ವಾತಂತ್ರ್ಯ ಯುದ್ಧದಲ್ಲಿ ಧುಮುಕಿ ತಮ್ಮ ಸೇವೆಯನ್ನು ಸಲ್ಲಿಸದಿರುತ್ತಿದ್ದಿಲ್ಲ. ಅವರ ಸದ್ಗುಣಗಳು ಅವರಿಗೆ ಕಾಂಗ್ರೆಸ ಸಂಸ್ಥೆಯಲ್ಲಿಯೂ ಸಹ ಉಚ್ಚ ಮತ್ತು ಹೊಣೆಗಾರಿಕೆಯ ಸ್ಥಾನವನ್ನು ಗಳಿಸಿಕೊಡುವುದು ಸಹಜಸಿದ್ಧವಾದ ಮಾತಾಗಿದೆ. ಆದರೆ ರಾಜಕೀಯರಂಗವು ಇವರ ಕಾರ್ಯ

ಕ್ಷೇತ್ರವಾಗಿ ಉಳಿಯಲೇ ಇಲ್ಲ.

ಸರಕಾರೀ ಹುದ್ದೇದಾರರಾಗಿದ್ದುಕೊಂಡು, ಮಾಡಲು ಸಾಧ್ಯವಾಗುವ ವಿವಿಧ ಸಮಾಜ ಕಾರ್ಯಗಳಲ್ಲಿ ರಾಯರ ಕೈವಾಡವಿದ್ದೇ ಇದೆ. ಶಿಸ್ತು, ಸ್ವಾವಲಂಬನ, ಪರೋಪಕಾರಬುದ್ಧಿ ಇವು ಚಿಕ್ಕ ಮಕ್ಕಳಲ್ಲಿ ಮೂಡಿ ಬೆಳೆದರೆ ಅವರು ಯೋಗ್ಯ ನಾಗರಿಕರಾಗಿ ಸಮಾಜ ಸುಧಾರಣೆಗೆ ಅನುಕೂಲವಾಗುವದು. ಈ ತತ್ವದ ಪ್ರಚಾರಕ್ಕಾಗಿ 'ಬಾಯ ಸ್ಕೌಟ' ಚಳುವಳಿಯು ನಮ್ಮ ದೇಶದಲ್ಲಿ ಕಾಲಿಟ್ಟಿತು. ಉಪಯುಕ್ತವಾದ ಈ ಕಾರ್ಯದಲ್ಲಿ ರಾಯರು ಮನಸ್ಸು ಹಾಕದಿರುವರೇ. ಧಾರವಾಡದಲ್ಲಿ ಜಿಲ್ಹಾ ನ್ಯಾಯಾಧೀಶರಾಗಿರುವಾಗ ಸ್ಕೌಟ ಶಿಕ್ಷಣವನ್ನು ಪಡೆದು ಮೊದಲು ಸ್ಕೌಟ ಮಾಸ್ತರರಾದರು. ಮುಂದೆ ಕೆಲವೇ ತಿಂಗಳುಗಳಲ್ಲಿ ಧಾರವಾಡ ಜಿಲ್ಹಾ ಸ್ಕೌಟ ಕಮೀಶನರರಾದರು. ನಂತರ ಮುಂಬೈ ಪ್ರಾಂತದ ಸ್ಕೌಟ ಕಮೀಶನರರಾಗಿ ಈ ಚಳುವಳಿಯು ಸುಗಮವಾಗಿ ಎಲ್ಲೆಡೆ ನಡೆಯಲು ಸಹಾಯ ಮಾಡಿದರು.

ಈ ಚಳುವಳಿಯನ್ನು ಪ್ರಾರಂಭಿಸಿದವನು ಬೆಡನ್ ಪಾವೆಲ್‌ನೆಂಬವನು. ಇವನು ಯುರೋಪದ ಬಿಳಿ ತೊಗಲಿನ ವ್ಯಕ್ತಿ. ಬಿಳಿಯರ ಒಣಹೆಮ್ಮೆ, ಭೇದಭಾವ ಅವನಲ್ಲಿಯೂ ಕಾಣಿಸಿಕೊಂಡಿತು. ಹಿಂದೀಯರ ಬಗ್ಗೆ ಅಲ್ಲದಸಲ್ಲದ ಉದ್ಗಾರಗಳನ್ನು ಇವನು ತೆಗೆದ. ಹಿಂದೀಯರೆಲ್ಲರೂ ಅವನ ಈ ಉದ್ಧಟ ವೃತ್ತಿಯನ್ನು ಪ್ರತಿಭಟಿಸಿದರು. ಸ್ವಾಭಿಮಾನಿ ಹಿಂದೀಯರೆಲ್ಲ ಈ ಚಳುವಳಿಯನ್ನು ಚಲ್ಲಿಕೊಟ್ಟು ತಮ್ಮ ಕೈತೊಳೆದುಕೊಂಡರು. 'ಹಿಂದುಸ್ತಾನ ಸ್ಕೌಟ' ಎಂಬ ಹೊಸ ಸಂಸ್ಥೆಯನ್ನು ಕಟ್ಟಿಕೊಂಡು ಅದರ ಮುಖಾಂತರ ಈ ಚಳುವಳಿ ನಡಸಿದರು. ರಾಯರ ನ್ಯಾಯ ಬುದ್ಧಿಗೆ ಬೆಡನ್ ಪಾವೆಲ್‌ನ ಅಸಡ್ಡೆ ವರ್ತನೆ ಸರಿದೋರಲಿಲ್ಲ. ಅವರೂ 'ಬಾಯ ಸ್ಕೌಟ' ಚಳುವಳಿಗೆ ಶರಣು ಹೊಡೆದರು. ಹೊಸ ಸಂಸ್ಥೆಗೆ ಆಶ್ರಯವಿತ್ತರು. 'ಬಾಯ ಸ್ಕೌಟ' ಚಳುವಳಿ ನಮ್ಮ ದೇಶದಲ್ಲಿ ತಿರುಗಿ ಏಳಲಾರದಂತೆ ಬಿದ್ದಿತು. 'ಹಿಂದುಸ್ತಾನ ಸ್ಕೌಟ' ಚಳುವಳಿ ಎದ್ದು ಬಲಗೊಂಡಿತು.

ಅನ್ಯ ದೇಶದಲ್ಲಿ ಕೆಲವು ಉಪಯುಕ್ತ ಸಾಮಾಜಿಕ ಸಂಸ್ಥೆಗಳು

ಉಗಮವಾಗಿ ಜಗತ್ತಿನ ಎಲ್ಲ ಭಾಗಗಳಲ್ಲಿ ಹಬ್ಬಿಕೊಂಡಿವೆ. ಇಂಥ ಸಂಸ್ಥೆಗಳಲ್ಲಿ ರೋಟರೀ ಕ್ಲಬ್ಬು ಒಂದು. 'ಮೇಲು ಕೀಳು' ಎಂಬ ಭಾವನೆಗೆ ಎಡೆಗೊಡದೆ ಸಂಸ್ಥೆಯ ಸದಸ್ಯರೆಲ್ಲರಿಗೆ ಅನ್ಯೋನ್ಯ ಸಹಾಯ ವನ್ನು ಸಾಧ್ಯವಿದ್ದ ರೀತಿಯಲ್ಲಿ ಒದಗಿಸುವ ಉದಾತ್ತ ಮೂಲ ತತ್ವದ ಮೇಲೆಯೇ ಈ ಜಾಗತಿಕ ಸಂಸ್ಥೆಯು ಬೆಳೆದು ನಿಂತಿದೆ. ರಾಯರೂ ಕೂಡ 'ರೋಟೇರಿಯನ್' ಆದರು. ಅಹಮ್ಮದಾಬಾದಿನಲ್ಲಿ 'ರೋಟರಿ ಕ್ಲಬ್ಬ'ನ್ನು ಸ್ಥಾಪಿಸಿದ ಶ್ರೇಯಸ್ಸು ರಾಯರ ಪಾಲಿನದೇ. ಸಮಾಜಕ್ಕೆ ಹಿತಕರವಾದ ಯಾವದೇ ಕಾರ್ಯವು-ಅದು ದೇಶದ್ದೇ ಇರಲಿ ವಿದೇಶ ದ್ದೇ ಇರಲಿ—ರಾಯರ ಲಕ್ಷ್ಯವನ್ನು ತನ್ನ ಕಡೆಗೆ ಎಳೆಯದೆ ಹಾಗೆ ನಡೆ ದಿಲ್ಲ. ಸಮಾಜೋನ್ನತಿಗೆ ಸಹಕಾರಿಯಾದ ಎಲ್ಲಾ ಕೆಲಸಗಳನ್ನು ರಾಯರು ಮನಃಪೂರ್ವಕವಾಗಿ ಮಾಡುತ್ತ ಬಂದಿದ್ದಾರೆ. ಸಾಮಾಜಿಕ ಕೆಲಸದಲ್ಲಿ ಅವರಿಗೆ ಬೇಸರವೆಂಬದು ಗೊತ್ತಿಲ್ಲ. ಒಮ್ಮೆ ಕೈಕೊಂಡ ಕೆಲಸವನ್ನು ಕಡೆತನಕ ಮಾಡುವ ನಿಶ್ಚಯ ಅವರದು. ಯಾವ ಕಾರ ಣಗಳೂ ಅವರ ನಿಶ್ಚಯವನ್ನು ಬದಲಿಸಲಾರವು. ಇದುವೆ ರಾಯರ ಹಿರಿಮೆ. ಸಾಮಾಜಿಕ ಕಾರ್ಯಕರ್ತರ ಬಗ್ಗೆ ಮಮತೆ, ಸಹಾನು ಭೂತಿಗಳ ಭಾಂಡಾರವೇ ಇವರಲ್ಲಿದೆ. ಈ ಭಾಂಡಾರದಿಂದಲೇ ಕೆಲಸ ಗಾರರಿಗೆ ಧಾರಾಳವಾಗಿ ಸ್ಫೂರ್ತಿ ದೊರೆಯುತ್ತಲಿದೆ. ಈ ಭಾಂಡಾರ ದಿಂದಲೇ 'ನಮ್ಮ ಲೋಕೂರವರು' ಎಂಬ ಕಲ್ಪನೆ ಎಲ್ಲರಲ್ಲಿ ಆಳವಾಗಿ ಬೇರುಬಿಟ್ಟಿದೆ.

## ವಿವಿಧ ವಿಚಾರ ಲಹರಿ

ಒಮ್ಮೆ ನಾನು ನ್ಯಾಯಮೂರ್ತಿಗಳನ್ನು ಕಂಡಾಗ 'ತಾವು ಸಾರ್ವ ಜನಿಕ ಸಭೆಗಳಲ್ಲಿ ಮಾಡಿದ ಭಾಷಣಗಳು ನನಗೆ ದೊರೆಯಬಹುದೇ' ಎಂದು ಕೇಳಿದೆ. 'ಎಲ್ಲ ಭಾಷಣಗಳನ್ನು ಬರೆದಿಲ್ಲ. ಬರೆದವುಗಳೆಲ್ಲ ವನ್ನೂ ಕಾದಿಟ್ಟಿಲ್ಲ. ಹುಡುಕಿ ದೊರೆತವುಗಳನ್ನು ಕಳಿಸುತ್ತೇನೆ' ಎಂದರು. ಮರುದಿನ ಒಂದು ದೊಡ್ಡ ಗಂಟೇ ನನ್ನ ಕಡೆಗೆ ಬಂತು. ನ್ಯಾಯಮೂರ್ತಿಗಳು ಹಲವು ಸಂದರ್ಭಗಳಲ್ಲಿ ಮಾಡಿದ ಭಾಷಣ

ಗಳಿಂದಲೇ ಆ ಗಂಟು ತುಂಬಿತ್ತು. ಆ ಭಾಷಣಗಳ ವಿಷಯ ವೈವಿಧ್ಯವು ನನ್ನನ್ನು ಬೆರಗುಗೊಳಿಸಿತು. ಶಿಕ್ಷಣ, ಸಂಗೀತ, ಕಲೆ, ಆಟ, ಆಯು ರ್ವೇದ, ಧರ್ಮ ಮುಂತಾದ ವಿಷಯಗಳನ್ನು ರಾಯರು ತಮ್ಮ ಭಾಷಣಗಳಲ್ಲಿ ಚೆನ್ನಾಗಿ ವಿವೇಚಿಸಿದ್ದಾರೆ. ಇವರು ಮಾಡಿದ ಭಾಷಣ ಗಳೆಲ್ಲ ವಿಚಾರ ಪರಿಪುಷ್ಟವಾಗಿವೆ. ಪ್ರತಿ ವಿಷಯದಲ್ಲಿ ರಾಯರು ಅಧಿಕಾರ ವಾಣಿಯಿಂದ ಮಾತನಾಡಿದ್ದಾರೆ.

ವಿದ್ಯಾರ್ಥಿಗಳಿಗೆ ಉಪದೇಶ ಮಾಡುತ್ತ ಒಂದೆಡೆ ನ್ಯಾಯಮೂರ್ತಿ ಗಳು ಸೋಲಿನ ಬಗ್ಗೆ ಹೀಗೆ ಉದ್ಗಾರ ತೆಗೆದಿದ್ದಾರೆ. 'ಪರೀಕ್ಷೆಯಲ್ಲಿ ಸೋಲು ಎಂದೊಡನೆ ನಿಮಗೆ ರುಚಿಸುವದಿಲ್ಲ. ಪರೀಕ್ಷೆಯ ಸೋಲು ಕ್ಷಣಿಕವಾದದ್ದು. ಜೀವನದಲ್ಲಿಯ ಸೋಲುಗಳಿಗೆ ನೀವು ಸೊಪ್ಪು ಹಾಕತಕ್ಕದ್ದಲ್ಲ. ಆದರೆ ನೀವು ಸೋಲಬೇಕೇಕೆ? ನಿಮ್ಮ ವೇಳೆ, ಉತ್ಸಾಹಗಳನ್ನು ಯೋಗ್ಯ ಮಾರ್ಗದಲ್ಲಿ ವೆಚ್ಚಮಾಡಿದರೆ ಸೋಲು ನಿಮ್ಮನ್ನು ಸೋಂಕಲಾರದು. ಗೆಲುವಿಗೆ ಉತ್ಸಾಹವು ಬೇಕಾದ ಹಾಗೆ ಸೋಲಿಗೆ ನಿರುತ್ಸಾಹ ಬೇಕೇಬೇಕು. ನೀವು ನಿರುತ್ಸಾಹಕ್ಕೆ ಎಡೆಗೊಡ ದಿದ್ದರೆ ಸೋಲು ನಿಮ್ಮಿಂದ ದೂರ ಓಡುವದು. ಈ ವಿಷಯವಾಗಿ ನನ್ನ ಉದಾಹರಣೆಯನ್ನೇ ನಾನು ನಿಮಗೆ ಹೇಳಬಯಸುತ್ತೇನೆ. ನಾನು ಚಿಕ್ಕಂದಿನಲ್ಲಿಯೇ ವಕೀಲಿ ಪ್ರಾರಂಭಿಸಿದೆ. ಆಗ ನನ್ನಲ್ಲಿ ಸಾಮಾನ್ಯ ಮನುಷ್ಯನಿಗಿಂತ ಹೆಚ್ಚಿನ ಯೋಗ್ಯತೆ ಇದ್ದಿಲ್ಲ. ತಂದೆ ಯವರನ್ನು ಕಳೆದುಕೊಂಡ ನನಗೆ ಯಾರ ಬೆಂಬಲವೂ ಇರಲಿಲ್ಲ. ಏನು ಮಾಡಬೇಕೆಂಬದನ್ನು ಬಹಳ ವಿಚಾರ ಮಾಡಿ, ಪರಿಣಾಮವು ಏನೇ ಆದರೂ ವೇಳೆಯನ್ನು ಅನ್ಯಾಯವಾಗಿ ವೆಚ್ಚಮಾಡಬಾರದೆಂದು ನಿರ್ಧರಿಸಿದೆ. ಹಗಲು ಕಾಯಿದೆಯನ್ನು ಹೆಚ್ಚು ಮನನ ಮಾಡಿ ಹಿರಿ ವಕೀಲರಿಗೆ ಕಾಯಿದೆಯ ವಿಚಾರದಲ್ಲಿ ನೆರವಾಗುತ್ತಿದ್ದೆ. ಇರುಳು ಸಂಸ್ಕೃತ ಅಭ್ಯಾಸ, ಟಿಪ್ಪಣಿ ಬರೆಯುವದು ಮಾಡುತ್ತಿದ್ದೆ. ಕಿರಿ ವಕೀಲ ನಾದರೂ ಕೈಯಲ್ಲಿಯ ಕೆಲಸವನ್ನು ಕಷ್ಟಪಟ್ಟು ಮಾಡುತ್ತಾನೆ; ಹಿರಿ ವಕೀಲರು ಕೂಡ ಕಾಯಿದೆಯಲ್ಲಿ ಇವರ ಸಲಹೆ ಪಡೆಯುತ್ತಾರೆಂಬುದು ಪಕ್ಷಕಾರರಿಗೆ ತಿಳಿಯಲು ಬಹಳ ವೇಳೆ ತಗಲಲಿಲ್ಲ. ಹೀಗೆ ಒಮ್ಮೆ

ಜನರಿಗೆ ತಿಳಿದ ನಂತರ ಖಟ್ಲೆಗಳ ಸುರಿಮಳೆಯಾಯಿತು. ಉತ್ಪನ್ನ ಬೆಳೆಯಿತು. ಹೆಚ್ಚಿನ ಸ್ಥಾನ ದೊರಕಿತು. ಇದಕ್ಕೆಲ್ಲ ಒಂದೇ ಒಂದು ಕಾರಣ. ಪ್ರಾಮಾಣಿಕತನ ಮತ್ತು ವ್ಯವಸ್ಥಿತ ದುಡಿತ. ಆದುದರಿಂದ ನಿಮ್ಮ ಬಿಡುವಿನ ವೇಳೆಯನ್ನು ಉಪಯುಕ್ತ ಕಾರ್ಯವನ್ನು ಮಾಡುವ ದರಲ್ಲಿ ಕಳೆಯಿರಿ. ಆಲಸ್ಯವನ್ನು ಹೊರದೂಡಿರಿ. 'ಬೆಕ್ಕಿಗೆ ತಿನ್ನಲು ಮೀನು ಬೇಕು; ಆದರೆ ಪಾದಗಳು ಹಸಿಯಾಗುವದು ಬೇಡ' ಎಂಬ ಗಾದೆಯ ಮಾತಿನಂತೆ ಮಾತ್ರ ನೀವು ನಡೆಯಬೇಡಿರಿ. ಉತ್ಸಾಹದಿಂದ ಮುನ್ನುಗ್ಗಿರಿ. ಸತತೋದ್ಯೋಗಿಗಳಾಗಿರಿ. ಜೀವನದಲ್ಲಿ ಗೆಲುವು ನಿಮ್ಮದೇ ಆಗುವದು' ಇಂತಹ ಗುಟ್ಟಿನ ಮಾತುಗಳನ್ನು ನ್ಯಾಯ ಮೂರ್ತಿಗಳು ವಿದ್ಯಾರ್ಥಿಗಳಿಗೆ ಅನೇಕ ವೇಳೆ ಹೇಳಿ ಗೆಲುವಿನ ಸರಿ ಯಾದ ಮಾರ್ಗ ತೋರಿದ್ದಾರೆ. ಈ ಪ್ರಸಂಗದಲ್ಲಿ ರಾಯರು ತಮ್ಮದೇ ಉದಾಹರಣೆಯನ್ನು ಹೇಳಿದ್ದು ಔಚಿತ್ಯಪೂರ್ಣವಾಗಿದೆ. 'ಹಾಗೆ ನಡಿಯಿರಿ, ಹೀಗೆ ನಡಿಯಿರಿ' ಎಂದು ಹೇಳುವದು ಬಲು ಹಗುರ. 'ನಾನು ಹೀಗೆ ಮಾಡಿದ್ದೇನೆ. ಅದರಿಂದ ಜೀವನ ಸಂಗ್ರಾಮದಲ್ಲಿ ನನಗೆ ಸೋಲಿನ ಸುಳಿವಿಲ್ಲ' ಎಂದು ಹೇಳುವ ಅಧಿಕಾರ ದೊರಕುವದು ನ್ಯಾಯಮೂರ್ತಿಗಳಂತಹ ಆದರ್ಶ ವ್ಯಕ್ತಿಗಳಿಗೇ ಸಾಧ್ಯ. ಮತ್ತೊಂದು ಪ್ರಸಂಗದಲ್ಲಿ ವಿದ್ಯಾರ್ಥಿನಿಯರನ್ನು ಕುರಿತು 'ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಪಾರಿತೋಷಕವನ್ನು ಪಡೆಯುವದೇ ಶಿಕ್ಷಣದ ಅಂತಿಮ ಧ್ಯೇಯವಲ್ಲ. ಶಿಕ್ಷಣದ ಧ್ಯೇಯ ಸಾಧನೆಗೆ ಇದೊಂದು ಉಪಾಯ ಮಾತ್ರ. ನಿಮ್ಮನ್ನು ಸದ್ಗುಣಿಗಳನ್ನಾಗಿ ಮಾಡುವದು, ಜೀವನದ ಹೋರಾಟಕ್ಕೆ ಅಣಿ ಮಾಡುವದು, ವೇಳೆಗೆ ಬೇಕಾದಂತೆ ವರ್ತಿಸಲು ಕಲಿಸುವದು, ಶಾರೀರಕ ಮಾನಸಿಕ ವಿಕಾಸವನ್ನು ಮಾಡುವದು, ಕೊನೆಯದಾಗಿ 'ನಾನು ಕೀಳೆಂಬ ಭಾವನೆಯನ್ನು ಕಿತ್ತೊಗೆಯುವದು ಇವೇ ಎಲ್ಲ ಶಿಕ್ಷಣಗಳು ಸಾಧಿಸಬೇಕಾದ ಕಾರ್ಯಗಳು' ಎಂದು ಹೇಳಿದ್ದಾರೆ. ಅದೇ ಸಭೆಯಲ್ಲಿ 'ಸ್ತ್ರೀಯರು ಪುರುಷರನ್ನು ಸರಿಗಟ್ಟ ಲಾರರು ಎಂದು ತಿಳಿಯುವ ಕಾಲ ಒಂದಿತ್ತು. ಆದರೆ ಅದು ಈಗ ಮಾಯವಾಗಿದೆ. ಸ್ತ್ರೀಯರೂ ಕೂಡ ಪುರುಷರ ಹಾಗೆ ಕೆಲಸ ಮಾಡ

ಬಲ್ಲರು' ಎಂಬದು ಸಿದ್ಧವಾಗಹತ್ತಿದೆ. ನಿಮ್ಮಲ್ಲಿ ಆತ್ಮವಿಶ್ವಾಸಬೇಕು. ಇದಿಲ್ಲದಿದ್ದರೆ ನೀವು ಅಂಜುಬುರುಕರಾಗುವಿರಿ. ನಿಮ್ಮ ನೆರಳಿಗೆ ನೀವೇ ಅಂಜಹತ್ತುವಿರಿ. ಅಂಜುಬುರುಕ ಹೆಂಡತಿಯ ಕತೆಯನ್ನು ನೀವು ಕೇಳಿರಬಹುದು. ರಾತ್ರಿ ಸ್ವಲ್ಪ ಸಪ್ಪಳವಾದ ಕೂಡಲೆ ಹೆದರಿ ಕಳ್ಳರು ಬಂದರೆಂದು ಅವಳು ತನ್ನ ಗಂಡನನ್ನೆಬ್ಬಿಸುತ್ತಿದ್ದಳು. ಕಳ್ಳರು ಸದ್ದು ಮಾಡದಂತೆ ಬರುತ್ತಾರಾದ್ದರಿಂದ ಹೆದರುವ ಕಾರಣವಿಲ್ಲವೆಂದು ಗಂಡ ಅವಳನ್ನು ಸಮಾಧಾನಪಡಿಸುತ್ತಿದ್ದ. ಇದರಿಂದ ಅವಳ ಹೆದರಿಕೆ ಮತ್ತಷ್ಟು ಹೆಚ್ಚಾಯಿತು. ಈಗ ಯಾವ ಸದ್ದೂ ಇಲ್ಲ; ಕಳ್ಳರು ಬಂದಿರಬಹುದು ಎಂದು ಮತ್ತೆ ಗಂಡನನ್ನೆಬ್ಬಿಸಹತ್ತಿದಳಂತೆ. ನಿಮ್ಮಲ್ಲಿ ಧೈರ್ಯ, ಆತ್ಮವಿಶ್ವಾಸವಿರಬೇಕು; ನಾವು ಕೈಲಾಗದವರೆಂಬ ಭಾವನೆ ಹೋಗಬೇಕು' ಎಂಬ ಮನೋರಂಜಕ ಉಪದೇಶದ ಮಾತುಗಳನ್ನು ಹೇಳಿದ್ದಾರೆ.

ಶಿಕ್ಷಣದ ನಿಜವಾದ ಗುರಿ ಏನೆಂಬದನ್ನು ನ್ಯಾಯಮೂರ್ತಿಗಳು ನಿಚ್ಚಳವಾಗಿ ತಿಳಿಸಿದ್ದಾರೆ. ಸತತೋದ್ಯೋಗ ಸಾಹಸ, ಸ್ವಾವಲಂಬನ ಮುಂತಾದ ಗುಣಗಳಿಂದ ಮನುಷ್ಯನು ಹೇಗೆ ಪ್ರಗತಿ ಹೊಂದಬಲ್ಲ ನೆಂಬದನ್ನು ತಮ್ಮ ಉದಾಹರಣೆಯಿಂದಲೇ ತಿಳಿಸಿದ್ದಾರೆ. ಇವರ ವಿಚಾರಗಳಲ್ಲಿ ಗಾಂಭೀರ್ಯ ತುಂಬಿದೆ, ಅರ್ಥವು ತುಳುಕುತ್ತಿದೆ.

ಪುಣೆಯಲ್ಲಿಯ ಅಷ್ಟಾಂಗ ಆಯುರ್ವೇದ ಮಹಾ ವಿದ್ಯಾಲಯದ ಕಟ್ಟಡದ ಶಂಖು ಸ್ಥಾಪನೆಯ ಕೆಲಸವು ಲೋಕೂರವರ ಹಸ್ತದಿಂದ ನೆರ ವೇರಿತು. ಅದರಂತೆ ಅಖಿಲ ಭಾರತ ಆಯುರ್ವೇದ ಪರಿಷತ್ತಿನ ಬೆಳ್ಳಿಯ ಹಬ್ಬದ ಅಧ್ಯಕ್ಷಸ್ಥಾನವು ಲೋಕೂರವರಿಗೆ ಲಭಿಸಿತು. ಈ ಎರಡೂ ಸಂದರ್ಭಗಳಲ್ಲಿ ಅವರು ಆಯುರ್ವೇದ ಪದ್ಧತಿಯ ಚಿಕಿತ್ಸೆಯ ಮೇಲ್ಮೆಯನ್ನು ಸರಿಯಾಗಿ ಬಣ್ಣಿಸಿದ್ದಾರೆ. ಅದರ ಪ್ರಾಚೀನತೆಯನ್ನು ಎತ್ತಿ ತೋರಿಸಿದ್ದಾರೆ. ಅಧ್ಯಕ್ಷಸ್ಥಾನದಿಂದ ಲೋಕೂರವರು ಹೀಗೆ ಹೇಳಿದ್ದಾರೆ:—

'ಔಷಧೋಪಚಾರದಲ್ಲಿ ಆಯುರ್ವೇದ ಪದ್ಧತಿಯೇ ಬಹು ಪುರಾತನವಾದದ್ದೆಂದು ಅನೇಕ ಪಾಶ್ಚಾತ್ಯ ಸಂಶೋಧಕರ ದೃಢವಾದ

ಅಭಿಪ್ರಾಯದಿಂದ ಗೊತ್ತಾಗಿದೆ. ಮೊಟ್ಟಮೊದಲು ಚರಕ ಮತ್ತು ಸುಶ್ರೂತ ಗ್ರಂಥಗಳು ಅರಬೀ ಭಾಷೆಯಲ್ಲಿ ಭಾಷಾಂತರ ಮಾಡಲ್ಪಟ್ಟವು. ಅರಬ ದೇಶದಿಂದ ಇಜಿಪ್ತಕ್ಕೆ, ಗ್ರೀಸಕ್ಕೆ ಆಮೇಲೆ ಯುರೋಪದ ದೇಶಗಳಿಗೆ ಹೇಗೆ ಅದು ಸಾಗಿತೆಂಬದನ್ನು ಡಾ. ಮ್ಯಾಕ್ಸನೆಂಬುರ್ಗರು ಚನ್ನಾಗಿ ವಿವರಿಸಿದ್ದಾರೆ. ಅನುಮಾನದಲ್ಲಿ ನಮ್ಮ ದೇಶವೇ ಹಿಂದೊಮ್ಮೆ ಅಗ್ರಗಾಮಿಯಾಗಿತ್ತೆಂಬ ಬಗ್ಗೆ ನಮಗೆ ಹೆಮ್ಮೆ ಇದೆ. ಆದರೂ ಹಿಂದಿನದನ್ನೇ ಹೇಳುತ್ತ ಕುಳಿತರೆ ಆಗದು. ನೂರಾರು ವರ್ಷಗಳ ವರೆಗೆ ಆಯುರ್ವೇದ ಪದ್ಧತಿಗೆ ಹೆಚ್ಚು ಚಾಲನೆ ದೊರೆಯದೆ ಅದು ಆಧುನಿಕ ಪದ್ಧತಿಯಂತೆ ಆವಶ್ಯಕ ಬದಲಾವಣೆಯನ್ನು ಹೊಂದಿ ಸುಧಾರಿಸಿಲ್ಲ. ಅರ್ವಾಚೀನ ಸಂಶೋಧನೆಗಳಾದ 'ಎಕ್ಸರೇ, ಆಕ್ಸಿಜನ್, ಇಂಜೆಕ್ಶನ್ಸ, ವಿದ್ಯುಚ್ಚಿಕಿತ್ಸೆ, ಮುಂತಾದವುಗಳ ಉಪಯೋಗವನ್ನು ಆಯುರ್ವೇದ ಪದ್ಧತಿಗೆ ತಕ್ಕಂತೆ ಅಳವಡಿಸಿಕೊಳ್ಳಬೇಕು. ಅಂದರೆ ಹಿಂದೊಮ್ಮೆ ಬೆಳಗಿದ ಆಯುರ್ವೇದದ ಶುಭ್ರ ಕೀರ್ತಿ ಮತ್ತೆ ಹರಡುವದು.'

ಹಳೆಯದೆಲ್ಲವನ್ನು ಹಳಿ; ಹೊಸದೆಲ್ಲವನ್ನು ಹೊಗಳು ಎಂಬ ವಿಚಾರ ರಾಯರದಲ್ಲ. ನಮ್ಮಲ್ಲಿ ಅನೇಕ ಹಳೆಯ ಪದ್ಧತಿಗಳಿವೆ; ರೀತಿಗಳಿವೆ. ಅವುಗಳಲ್ಲಿ ಚನ್ನಾಗಿರುವವನ್ನು ಆಧುನಿಕ ಪದ್ಧತಿಗೆ ಮಾರ್ಪಡಿಸಬೇಕು. ಅದರಂತೆ ಹೊಸ ಪದ್ಧತಿಗಳಲ್ಲಿ ಉಪಯುಕ್ತವಾದವುಗಳನ್ನು ತೆಗೆದುಕೊಂಡು ಅದರಿಂದ ಲಾಭ ಹೊಂದಬೇಕು ಎಂಬ ಅಭಿಪ್ರಾಯ ರಾಯರದು. ಉಪಯುಕ್ತವಾದುದನ್ನು, ಕಲ್ಯಾಣಕಾರಕವಾದುದನ್ನು ಹಳೆಯದಿರಲಿ, ಹೊಸದಿರಲಿ ಉಪಯೋಗಿಸಬೇಕು. ಹಳೆ-ಹೊಸ ಇವು ಬರೇ ಉದ್ರೇಕವನ್ನು ಹುಟ್ಟಿಸಬಹುದು. ಆದರೆ ಉಪಯುಕ್ತತೆಯನ್ನು ನೋಡಿ ಯಾವುದೊಂದು ವಸ್ತುವಿನ ಯೋಗ್ಯತೆಯನ್ನು ಗೊತ್ತು ಮಾಡತಕ್ಕದ್ದು. ಇವು ನಾರಾಯಣರಾಯರ ನ್ಯಾಯಸಮ್ಮತ ವಿಚಾರಗಳು.

ಸಂಗೀತ, ಕಲೆಗಳೆಂದರೆ ರಾಯರಿಗೆ ತುಂಬ ಮೆಚ್ಚಿನ ವಿಷಯಗಳು. ೧೯೪೬ನೇ ಮಾರ್ಚದಲ್ಲಿ ಜರುಗಿದ ಲಿಟರರಿ ಕಾಂಗ್ರೆಸ ಮತ್ತು ಮೊಗಲ್

ಕಲೆಯ ಪ್ರದರ್ಶನದ ಅನಾವರಣ ಸಮಾರಂಭವು ರಾಯರ ಕೈ ಯಿಂದಲೇ ನಡೆಯಿತು. ಆಗ ನ್ಯಾಯಮೂರ್ತಿಗಳು ಆಡಿದ ಮಾತು ಗಳು ಹೀಗಿವೆ--'ಮೊಗಲ್ ಕಲೆಯ ರೀತಿಯು ಮಧ್ಯ ಏಸಿಯಾದಲ್ಲಿ ಪ್ರಚಲಿತವಾದ ಕಲೆಯ ರೀತಿಯ ಮೇಲೆಯೇ ಬೆಳೆದು ಬಂದಿದೆ. ಮೊಗಲರು ಹಿಂದುಸ್ತಾನಕ್ಕೆ ಬರುವ ಮುಂಚೆ ಹಿಂದುಗಳಿಗೆ ಬಣ್ಣ ಚಿತ್ರವು ಗೊತ್ತಿದ್ದಿಲ್ಲವೆಂದು ತಿಳಿಯಕೂಡದು. ಆದರೆ ಮೊಗಲರ ಪೂರ್ವದ ಕಾಲದಲ್ಲಿ ಘನತೆಗೇರಿದ ಬಣ್ಣ-ಚಿತ್ರ ಕಲೆಗೆ ಆ ಕಾಲದ ಮುಸಲ್ಮಾನ ಅರಸರಿಂದ ಉತ್ತೇಜನ ದೊರೆಯಲಿಲ್ಲ. ಮೊಗಲರ ಆಳಿಕೆಯ ಕಾಲದಲ್ಲಿ ಈ ಕಲೆಗೆ ಪ್ರೋತ್ಸಾಹನೆ ದೊರೆತು ಅದು ಮೊಗಲ ಚಿತ್ರದ ರೀತಿಯನ್ನು ಕೆಲಮಟ್ಟಿಗೆ ಅನುಕರಣ ಮಾಡಿ ಬೆಳೆಯತೊಡ ಗಿತು. ಅಕಬರ ಮತ್ತು ಜಹಾಂಗೀರರ ಕಾಲದಲ್ಲಿ ಈ ಬಣ್ಣ-ಚಿತ್ರದ ಕಲೆ ಶಿಖರಕ್ಕೆ ಮುಟ್ಟಿತು. ಮೊಗಲ ಬಾದಶಹರಿಂದ ಹಿಂದುಗಳ ಬಣ್ಣ- ಚಿತ್ರ ಕಲೆ ಊರ್ಜಿತವಾಗಿ ಮತ್ತೆ ಕಳೆಗಟ್ಟಿತು. ಆಗಿನ ಮೇಲ್ತರಗತಿಯ ಕಲೆಯು ಪ್ರತಿಭಾವಂತ ಕಲಾವಿದರ ನೈಪುಣ್ಯದ ಪ್ರತೀಕವಾಗಿದೆ.' ಈ ಬಗೆಯಾಗಿ ರಾಯರು ಬಣ್ಣ-ಚಿತ್ರ ಕಲೆಯ ಬಗ್ಗೆ ತಮ್ಮ ವಿಚಾರ ಗಳನ್ನು ತಿಳಿಸಿದ್ದಾರೆ. ೧೯೪೩ನೆ ಇಸ್ವಿಯ ನವ್ಹಂಬರ ತಿಂಗಳಲ್ಲಿ ಸಂಗೀತ ಶಾಸ್ತ್ರ ನಿಪುಣೆಯರಾದ ಅತಿಯಾ ಬೇಗಮರವರು 'ಹಿಂದು ಸ್ತಾನದ ಶಾಸ್ತ್ರೀಯ ಸಂಗೀತ' ಎಂಬ ವಿಷಯವನ್ನು ಕುರಿತು ಒಂದು ಉಪನ್ಯಾಸ ಕೊಟ್ಟರು. ಆ ಸಭೆಗೆ ನ್ಯಾಯಮೂರ್ತಿಗಳೇ ಅಧ್ಯಕ್ಷ ರಿದ್ದರು. ಆಗ ಇವರು ಹೇಳಿದ ಕೆಲವು ಸಂಗತಿಗಳು ಕನ್ನಡಿಗರ ದೃಷ್ಟಿಯಿಂದ ಅತಿ ಮಹತ್ವದವುಗಳಾಗಿವೆ. 'ಶಾಸ್ತ್ರೋಕ್ತ ಸಂಗೀತ ವನ್ನು ನಾನು ಅಭ್ಯಾಸಮಾಡಿಲ್ಲ. ಆದರೆ ಒಳ್ಳೇ ಸಂಗೀತವನ್ನು ಸವಿ ಯುವವರಲ್ಲಿ ನಾನು ಯಾರಿಗೂ ಮಣಿಯುವದಿಲ್ಲ. ಹೃದಯಸ್ಪರ್ಶಿ ಯಾದ ಸಂಗೀತವನ್ನು ತಾಸುಗಟ್ಟಲೆ ಅತ್ತಿತ್ತ ಅಲುಗಾಡದಂತೆ ಕೇಳಿ ದ್ದೇನೆ. ಹೀಗೆ ಮಾಡದವರಾರು? ರಸಿಕ ಹೃದಯಕ್ಕೆ ಉತ್ಕೃಷ್ಟ ಸಂಗೀತ ಎಷ್ಟಾದರೂ ಬೇಕು. ಸಶಾಸ್ತ್ರ ಸಂಗೀತ ಪದ್ಧತಿಗಳಲ್ಲಿ ಹಿಂದು ಸ್ತಾನಿ ಮತ್ತು ಕರ್ನಾಟಕ ಎಂಬೆರಡೇ ಪದ್ಧತಿಗಳಿಗೆ ಮನ್ನಣೆ ದೊರೆ

ತಿವೆ. ಸಾಮವೇದ ಕಾಲದ ಸಪ್ತಸ್ವರಗಳೇ ಈಗಲೂ ಇವೆ. ಆದರೆ ಭರತ ಮುನಿಗಿಂತ ಮೊದಲು ಯಾರೂ ಸಂಗೀತ, ನೃತ್ಯ, ನಾಟ್ಯಕಲೆ ಈ ವಿಷಯಗಳ ಮೇಲೆ ಉದ್ಗ್ರಂಥವನ್ನು ಬರೆದಿಲ್ಲ. ಭರತಮುನಿಯ ಸಂಗೀತ ಪದ್ಧತಿಯನ್ನು ಕ್ರಿಸ್ತಶಕ ಎಂಟು ಅಥವಾ ಒಂಭತ್ತನೆಯ ಶತಮಾನದಲ್ಲಿ ಅಚಲಾನಂದರೆಂಬವರು ಬದಲಾಯಿಸಿದರು. ಈ ಅಚಲಾನಂದರು ಕನ್ನಡಿಗರಾಗಿದ್ದರು. ಇವರ ಪದ್ಧತಿಯನ್ನು ಅನುಸರಿಸಿಯೇ ಜಯದೇವರ 'ಗೀತಗೋವಿಂದ'ವೆಂಬ ಗ್ರಂಥವು ರಚಿಸಲ್ಪಟ್ಟಿತು. ಭರತಮುನಿಯ ತರುವಾಯ ಸಂಗೀತ ಶಾಸ್ತ್ರದ ವಿಷಯವಾಗಿ ಸುವ್ಯವಸ್ಥಿತ ರೀತಿಯಲ್ಲಿ ಸಾರಂಗದೇವರೆಂಬವರು 'ಸಂಗೀತ ರತ್ನಾಕರ' ಎಂಬ ಗ್ರಂಥವನ್ನು ಬರೆದಿದ್ದಾರೆ. ಆ ಗ್ರಂಥಕ್ಕೆ ಚನ್ನಾಗಿ ಮನ್ನಣೆ ದೊರೆಯಿತು. ಈ ಸಾರಂಗದೇವನು ಕಾಶ್ಮೀರದವನು. ಇವನು ಸಂಗ್ರಹಿಸಿದ ೨೬೪ ರಾಗಗಳಲ್ಲಿ ೫೨ ಮಾತ್ರ ಜನಮನವನ್ನು ಹಿಡಿದಿದ್ದವು. ಈ ಸಾರಂಗದೇವನ ಪದ್ಧತಿಯನ್ನು ೧೩–೧೪ ಶತಮಾನದಲ್ಲಿ ಗೋಪಾಲನಾಯಕರೆಂಬ ಕನ್ನಡದಾಸರು ಬೆಳೆಯಿಸಿ ಪ್ರಚಾರ ಮಾಡಿದರು. ಈ ಸಂಗತಿಯನ್ನು ಅತಿಯಾಬೇಗಮರು ತಮ್ಮ ಸುಪ್ರಸಿದ್ಧ ಪುಸ್ತಕದಲ್ಲಿ ಉಲ್ಲೇಖಿಸಿ ಕನ್ನಡದಾಸರಾದ ಗೋಪಾಲನಾಯಕರೇ ಹಿಂದುಸ್ತಾನಿ ಸಂಗೀತ ಪದ್ಧತಿಯ ಜನಕರೆಂದು ಮುಕ್ತಕಂಠದಿಂದ ಹೇಳಿದ್ದಾರೆ. ಆಗ ದಿಲ್ಲಿಯ ಬಾದಶಹನಾದ ಅಲ್ಲಾವುದ್ದೀನ ಖಿಲ್ಜಿಯ ಮಲಿಕನೆಂಬ ಸೇನಾಪತಿಯು ದೇವಗಿರಿಯ ರಾಮಚಂದ್ರದೇವನನ್ನು ಸೋಲಿಸಿದನು. ಮಲಿಕನು ದೇವಗಿರಿಯಲ್ಲಿದ್ದ ಗೋಪಾಲ ನಾಯಕರ ಸಂಗೀತ ಪ್ರತಿಭೆಗೆ ಮರುಳಾದ. ಈ ಸಂಗೀತ ರತ್ನವು ದಿಲ್ಲಿಯ ದರ್ಬಾರದಲ್ಲಿದ್ದು ಅದರ ಶೋಭೆಯನ್ನು ಹೆಚ್ಚಿಸಬೇಕೆಂದು ಆತ ನೆನಸಿದ. ಗೋಪಾಲನಾಯಕರು ದಿಲ್ಲಿಗೆ ತೆರಳಿದರು. ಅಲ್ಲಾವುದ್ದೀನ ಖಿಲ್ಜಿಯು ನಾಯಕರ ಸಂಗೀತ ಕೇಳಿ ಕುಣಿದಾಡಿದ. ಅವರನ್ನು ಆದರಿಸಿದ; ಗೌರವಿಸಿದ. ಖಿಲಜಿಗಾಗಿ ನಾಯಕರು ಹಿಂದುಸ್ತಾನಿ ರಾಗಗಳನ್ನು ರಚಿಸಹತ್ತಿದರು. ಹೀಗೆ ಹಿಂದುಸ್ತಾನಿ ಪದ್ಧತಿಯ ಸಂಗೀತವು ಒಬ್ಬ ಕನ್ನಡ ಸಂಗೀತ ಕಲಾವಿದನಿಂದ ಇಳಿದುಬಂದಿದೆ. ಮುಂದೆ ಈ

ಪದ್ಧತಿಯನ್ನೇ ಅಕಬರ ಬಾದಶಹನ ಕಾಲದಲ್ಲಿ ತಾನಸೇನನು ಹೆಚ್ಚಾಗಿ ಬೆಳಿಸಿದ್ದು ಸರ್ವಶ್ರುತವಿದೆ! ಇತಿಹಾಸ ಪ್ರಸಿದ್ಧ ಅದೆಷ್ಟೋ ಕನ್ನಡ ಜ್ಯೋತಿಗಳ ಪರಿಚಯು ನಮಗಾಗದೆ ಉಳಿದಿದೆ. ಕನ್ನಡಿಗರಾದ ಅಚಲಾನಂದರು, ಗೋಪಾಲನಾಯಕರು ನಮ್ಮ ದೇಶದ ಸಂಗೀತ ದೇವಿಗೆ ಸಲ್ಲಿಸಿದ ಮುಡಿಪನ್ನು ಹಿಂದೀಯರೆಲ್ಲರೂ ತಿಳಿದುಕೊಂಡು ಅವರಿಗೆ ನಮ್ಮ ಕೃತಜ್ಞತೆಯನ್ನು ಅರ್ಪಿಸಬೇಕಾಗಿದೆ. ಕನ್ನಡಿಗರಂತೂ ಈ ಇಬ್ಬರು ವಿಭೂತಿ ಪುರುಷರನ್ನು ತಮ್ಮ ಹೃದಯದಲ್ಲಿಟ್ಟು ಪೂಜಿಸ ಬೇಕು. ಹಿಂದೀ ಸಂಗೀತ ಶಾಸ್ತ್ರದಲ್ಲಿ 'ಕರ್ನಾಟಕಿ' 'ಹಿಂದುಸ್ತಾನಿ' ಎಂಬೆರಡೇ ಪದ್ಧತಿಗಳಿವೆ. ಕರ್ನಾಟಕಿ ಪದ್ಧತಿಯಂತೂ ಕನ್ನಡಿಗರ ದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಹಿಂದುಸ್ತಾನಿ ಪದ್ಧತಿಯ ಉತ್ಪಾದನ, ಪ್ರಚಾರದ ಶ್ರೇಯಸ್ಸು ಕನ್ನಡಿಗರ ಪಾಲಿಗೆ ಇದೆ. ಒಟ್ಟಾರೆ ಹಿಂದೀ ಸಂಗೀತಶಾಸ್ತ್ರದ ಪ್ರವರ್ತಕರೇ ಕನ್ನಡಿಗರು! ಎಂತಹ ಮಹತ್ಕಾರ್ಯ ನಮ್ಮ ಪೂರ್ವಜರದು!!" ಈ ವಿಷಯವನ್ನು ನ್ಯಾಯಮೂರ್ತಿಗಳು ತಮ್ಮ ಭಾಷಣದಲ್ಲಿ ಎತ್ತಿ ಸಾರಿಹೇಳಿ ನಮಗೆ ಉಪಕಾರಮಾಡಿದ್ದಾರೆ. ಸಂಗೀತದ ಬಗ್ಗೆ ಮಾತನಾಡುವಾಗ ಮಾನ ಸಲ್ಲಬೇಕಾದವರಿಗೆ ಸಲ್ಲಿಸುವುದು ನ್ಯಾಯಮೂರ್ತಿಗಳಿಗೆ ಹೊಸದಲ್ಲ. ಅವರ ದೃಷ್ಟಿ ಯಾವಾಗಲೂ ನ್ಯಾಯಪರಿಪೂರ್ಣವಾದುದು.

೧೯೩೬ನೇ ಇಸ್ವಿಯಲ್ಲಿ ಇಂಡಿಯನ್ ಒಲಿಂಪಿಕ್ ಅಸೋಸಿಯೇಶನದ ಮುಂಬಯಿ ಶಾಖೆಯ ಪ್ರಾರಂಭೋತ್ಸವದಲ್ಲಿ ಮಾತನಾಡುತ್ತ ಲೋಕೂರವರು ಹೀಗೆ ಅಪ್ಪಣೆಕೊಡಿಸಿದರು. 'ಶಕ್ತಿಶೌರ್ಯತ್ವಿನಲ್ಲಿ ಯಾರು ಎಲ್ಲಕ್ಕೂ ಮೇಲು ಎಂದು ತಿಳಿಯುವದೇ ಈ ಒಲಿಂಪಿಕ್ ಪಂದ್ಯಾಟದ ಉದ್ದೇಶವಾಗಿದೆ. ಈ ವಿಚಾರ ನಮಗೆ ಹೊಸದಲ್ಲ'. ಪೂರ್ವದಲ್ಲಿ ಅಶ್ವಮೇಧ ಯಾಗದಿಂದ ಶಕ್ತಿಯಲ್ಲಿ ಯಾರು ಹೆಚ್ಚಿನವರೆಂಬುದು ನಿರ್ಣಯವಾಗುತ್ತಿತ್ತು. ಆಗ ಯುದ್ಧಗಳಾಗುತ್ತಿದ್ದವು. ಈಗ ವಿವಿಧ ಆಟಗಳಲ್ಲಿ ಪೈಪೋಟಿ ನಡೆಯುತ್ತಿದೆ. ನಮ್ಮ ದೇಶದಲ್ಲಿ ಮಲ್ಲರಿದ್ದಾರೆ, ಜಟ್ಟಿಗಳಿದ್ದಾರೆ. ಆಧುನಿಕ ಪದ್ಧತಿಯ ಆಟಗಳಲ್ಲಿ ಇನ್ನೂ ಅಮೇರಿಕಾ, ಇಂಗ್ಲಂಡ, ಜರ್ಮನಿ ಮುಂತಾದ ರಾಷ್ಟ್ರಗಳನ್ನು ಸರಿಗಟ್ಟಿ

ಲಾರೆವು. ಶಾರೀರಕ ಶಿಕ್ಷಣ ನಮ್ಮ ದೇಶದಲ್ಲಿ ಇನ್ನೂ ಬಹಳ ಬೆಳೆಯು ಬೇಕಾಗಿದೆ. ಪ್ರತಿಯೊಬ್ಬ ವಿದ್ಯಾರ್ಥಿಯು ಉಳಿದ ವಿಷಯುಗಳಂತೆ ಈ ವಿಷಯುಕ್ಕೂ ಮಹತ್ವಕೊಡಬೇಕು. ಶಿಕ್ಷಣ ಸಂಸ್ಥೆಗಳೂ ಇತ್ತ ಹೆಚ್ಚು ಗಮನಿಸಬೇಕು.' ಈ ಶಬ್ದಗಳಿಂದ ಶಾರೀರಕ ಶಿಕ್ಷಣದ ಅಗತ್ಯ ವನ್ನು ಮಾರ್ಮಿಕವಾಗಿ ಸೂಚಿಸಿದ್ದಾರೆ.

೧೯೪೦ನೇ ಇಸ್ವಿಯಲ್ಲಿ ಪುಣೆಯ ಸಿಟಿ ಜನರಲ್ ಲಾಯಬ್ರರಿಯ ೯೨ನೇ ವಾರ್ಷಿಕೋತ್ಸವವು ನ್ಯಾಯಮೂರ್ತಿಗಳ ಅಧ್ಯಕ್ಷತೆಯಲ್ಲಿ ನೆರವೇರಿತು. ಯಾವ ವಿಷಯುದ ಬಗ್ಗೆ ಮಾತನಾಡಿದರೂ ಇತಿಯಿಂದ ಅಥದ ವರೆಗೆ ಎಲ್ಲವನ್ನೂ ಸ್ವಲ್ಪದರಲ್ಲಿ ಸ್ವಾರಸ್ಯವಾಗಿ ಹೇಳುವದು ನ್ಯಾಯಮೂರ್ತಿಗಳ ಪದ್ಧತಿ. 'ಕಾಗದ ಮತ್ತು ಅಚ್ಚು ಮಾಡುವ ಸಾಧನ ಇವುಗಳು ಹುಟ್ಟುವ ಪೂರ್ವದಲ್ಲಿ ವಾಚನಾಲಯುದ ಕಲ್ಪನೆ ಇದ್ದಿಲ್ಲವೆಂದಲ್ಲ. ಆಗಿನ ಕಾಲದಲ್ಲಿ ಓದಬಲ್ಲ ಸಾರ್ವಜನಿಕರ ಉಪ ಯೋಗಕ್ಕಾಗಿ ಕಲ್ಲಿನಲ್ಲಿ ಬರೆದು ಅದನ್ನು ಬೈಲೊಳಗೆ ನೆಡುತ್ತಿದ್ದರು. ಆದರೆ ಈಗ ಅದೇ ಕಲ್ಪನೆಯು ಬೆಳೆದು ಗ್ರಂಥ ಸಂಗ್ರಹಾಲಯ, ವಾಚನಾಲಯುಗಳಾಗಿ ನಿಂತಿದೆ. ಗ್ರಂಥಗಳು, ಕಟ್ಟಡ ಹಾಗು ವಿದುಳು ಇವು ಈಗಿನ ಗ್ರಂಥಾಲಯುಗಳಿಗೆ ಬೇಕಾದ ಆವಶ್ಯಕ ಘಟಕಗಳು. ಗ್ರಂಥಗಳು ಜ್ಞಾನವನ್ನು ಬೆಳಸಲು ಸಾಮುಗ್ರಿಗಳನ್ನು ಪೂರೈಸುತ್ತವೆ; ಕಟ್ಟಡವು ಇಂಥ ಗ್ರಂಥಗಳನ್ನು ಕಾದಿಡಲು ಅನುಕೂಲತೆ ಗಳನ್ನೊದಗಿಸುತ್ತದೆ. ಈ ಜ್ಞಾನದ ಉಪಯೋಗವನ್ನು ಮಾಡಿ ಕೊಳ್ಳಲು ವಿದುಳು ಬೇಕು. ಇವುಗಳಲ್ಲಿ ಒಂದು ಕಡಿಮೆಯಾದರೂ ಲಾಯಬ್ರರಿ ನಡೆಯಲಾರದು. ಗ್ರಂಥಸಂಗ್ರಹಾಲಯುಗಳು ಜ್ಞಾನದ ಸೆಲೆಗಳ ಬಾಯಿಯಂತಿವೆ. ಇಷ್ಟವಿದ್ದವರು ಗ್ರಂಥಗಳನ್ನು ಓದಿ ಜ್ಞಾನಾಮೃತವನ್ನು ಕುಡಿದು ತಣಿಯಬಹುದು. ಸಾರ್ವಜನಿಕ ಲಾಯಬ್ರರಿಯಿಂದ ಪಡೆದ ಪುಸ್ತಕಗಳನ್ನು ಹೆಚ್ಚು ಅವಧಿಯ ವರೆಗೆ ಉಪಯೋಗಿಸಲು ಬರುವದಿಲ್ಲ. ಒಳ್ಳೆ ಗ್ರಂಥವು ಮನುಷ್ಯನ ಒಳ್ಳೇ ಸಂಗಡಿಗನೆಂದು ತಿಳಿಯಲಾಗುತ್ತದೆ. ಒಳ್ಳೆ ಗ್ರಂಥಗಳನ್ನು ತೀವ್ರ ತಿರುಗಿ ಕೊಡುವದಾದರೆ ಅವು ಸಂಗಡಿಗರಾಗಿ ಸಾಕಷ್ಟು ಜ್ಞಾನವನ್ನು

ಕೊಡಲಾರವು. ಪ್ರತಿ ಮನೆಯಲ್ಲಿ ಒಳ್ಳೇ ಗ್ರಂಥಸಂಗ್ರಹ ಚಿಕ್ಕ ದಾದರೂ ಬೇಕು. ಇದರಿಂದ ಮಕ್ಕಳ ಒಲವು ಜ್ಞಾನಗಳಿಸುವ ಈ ಸಾಧನೆಯ ಕಡೆಗೆ ಸಹಜವಾಗಿ ಬೆಳೆಯಬಹುದು'–ಹೀಗೆ ಗ್ರಂಥಾಲಯ ಗಳ ಬಗ್ಗೆ ಎಲ್ಲ ಸಂಗತಿಗಳನ್ನು ತಮ್ಮ ಭಾಷಣದಲ್ಲಿ ಹೇಳಿದ್ದಾರೆ.

೧೯೩೭ನೇ ಇಸ್ವಿಯಲ್ಲಿ ಅಹಮ್ಮದ ನಗರದ ಕರ್ನಾಟಕ ಅಸೋಸಿ ಯೇಶನದಲ್ಲಿ ಮಾತನಾಡುವಾಗ ತಮ್ಮ ಕನ್ನಡ ಹೃದಯವನ್ನೇ ಬಿಚ್ಚಿ ತೋರಿಸಿದ್ದಾರೆ. 'ರಾಜಕೀಯ ಕಾರಣಗಳಿಗಾಗಿ ಕರ್ನಾಟಕವು ಅನೇಕ ಆಡಳಿತಕ್ಕೆ ಒಳಪಟ್ಟರೂ ನಮ್ಮೆಲ್ಲರ ಭಾಷೆ ಒಂದು, ಸಂಸ್ಕೃತಿ ಒಂದು. ನಮ್ಮಲ್ಲಿ ಕೆಲವರು ಜೀವನೋಪಾಯಕ್ಕಾಗಿ ಕರ್ನಾ ಟಕದ ಹೊರಗೆ ನೆಲಸಬಹುದು. ಕರ್ನಾಟಕದಿಂದ ಹೊರಗೆ ಹೋದರೂ ನಾವು ನಮ್ಮ ಭಾಷೆ ಸಂಸ್ಕೃತಿಗಳನ್ನು ಕಾಯ್ದುಕೊಳ್ಳಬೇಕು. ಹೀಗೆ ಮಾಡದಿದ್ದರೆ ನಮ್ಮ ತಾಯಿಗೆ ಅನ್ಯಾಯ ಬಗೆದಂತಾಗುತ್ತದೆ. ಅದಕ್ಕಾಗಿ ಇಂತಹ ಅಸೋಸಿಯೆಶನ್ನುಗಳ ಅಗತ್ಯವಿದೆ. ಮುಂಬಯಿ ಕರ್ನಾಟಕವಲ್ಲಿ ಬರೆಯುವ ಭಾಷೆ, ಆಡುವ ಭಾಷೆ ಇವುಗಳಲ್ಲಿ ಬಹಳ ಅಂತರವಿದೆ. ಇವೆರಡೂ ಒಂದೇ ರೂಪಕ್ಕಿಳಿದರೆ ಭಾಷೆಯು ಹೆಚ್ಚು ವಿಕಾಸವಾಗಲು ಅನುಕೂಲವಾಗುವದು. ನಮ್ಮ ಹಳೆಗನ್ನಡ ಸಾಹಿತ್ಯ ಭಾಂಡಾರವು ಬಹು ದೊಡ್ಡದಿದೆ. ಅನೇಕ ಉದ್ಗ್ರಂಥಗಳಿಂದ ತುಂಬಿದೆ. ಅವುಗಳನ್ನು ಅಭ್ಯಾಸ ಮಾಡುವುದು ಹಾಗಿರಲಿ, ನಮ್ಮ ಭಾಷೆಯಲ್ಲಿ ನಾವು ಕಾಗದ ಬರೆಯದಷ್ಟು ಮುಗ್ಗಲುಗೇಡಿಗಳಾಗಿದ್ದೇವೆ. ಕಾಗದದಲ್ಲಿ ಬರೆಯುವ ಭಾಷೆಯ ಬಗ್ಗೆ ನಾವು ಉದಾಸೀನರಾಗಬಾ ರದು. ನಮ್ಮ ಔದಾಸೀನ್ಯದಿಂದ ನಾವು ಹಿಂದುಳಿದಿದ್ದೇವೆ' ಎಂದು ಮುಂತಾಗಿ ಹೇಳಿದರು.

೧೯೪೭ನೇ ಇಸ್ವಿಯಲ್ಲಿ ಅಖಿಲ ದೇಶಸ್ಥ ಋಗ್ವೇದೀ ಬ್ರಾಹ್ಮಣ ಪರಿಷತ್ತಿನ ಅಧ್ಯಕ್ಷಪೀಠದಿಂದ ಈಗಿನ ಬ್ರಾಹ್ಮಣಸಮಾಜದ ಬಗ್ಗೆ ಮನನೀಯ ಸಂಗತಿಗಳನ್ನು ತಿಳಿಸಿದ್ದಾರೆ. ಎಲ್ಲ ವಿಷಯಗಳನ್ನು ತಮ್ಮ ಅನುಭವದಿಂದ ಇಲ್ಲಿ ಸಂಪೂರ್ಣ ವಿಚಾರ ಮಾಡಿ ವಿವೇಚಿಸಿ ದ್ದಾರೆ. ಅಂತೆಯೇ ಇವರು ಹೇಳಿದ ಸಂಗತಿಗಳು ಅತಿ ನಿಚ್ಚಳ

ವಾಗಿರುತ್ತವೆ.

ಶಿಕ್ಷಣ ಸಂಸ್ಥೆಗಳ ಬಗ್ಗೆ ಮಾತನಾಡುವಾಗ ಅವರ ವಿದ್ಯಾರ್ಥಿ ದಿಶೆಯಲ್ಲಿಯ ಅನುಭವಗಳನ್ನೂ, ವಿಚಾರಗಳನ್ನೂ ನಮ್ಮೆದುರು ಇಟ್ಟಿದ್ದಾರೆ. ವಯಸ್ಸಿನ ಇಪ್ಪತ್ತನೇ ವರ್ಷದಲ್ಲಿ ಎಲ್.ಎಲ್.ಬಿ. ಪರೀಕ್ಷೆ ಮುಗಿಸಿ ವಕೀಲಿಯನ್ನು ಪ್ರಾರಂಭಿಸಿದ ಇವರು ಆದರ್ಶ ವಿದ್ಯಾರ್ಥಿಗಳು. ಶಿಕ್ಷಣದ ಬಗ್ಗೆ ಮಾತನಾಡಲು ಅಧಿಕಾರವಾಣಿ ಇವರಿಗೆ ಇದೆ.

ಓಲಿಂಪಿಕ್ ಪಂದ್ಯಾಟದ ಬಗ್ಗೆ ಮಾತಾಡಿದರು. ನಾರಾಯಣ ರಾಯರು ಆಟಪಟುಗಳು. ಟೆನಿಸ ಮತ್ತು ಬ್ಯಾಡಮಿಂಟನ ಆಟಗಳಲ್ಲಿ ನಿಪುಣರು. ಎಷ್ಟೋ ಪಾರಿತೋಷಕ (ಟ್ರಾಫಿ)ಗಳನ್ನು ಸಂಪಾದಿಸಿದ್ದಾರೆ. ದೇಹಾರೋಗ್ಯವನ್ನು ಮೊದಲಿನಿಂದಲೂ ಚನ್ನಾಗಿ ಕಾಯ್ದುಕೊಂಡಿದ್ದಾರೆ. ದಿನವಾಗಲೂ ತಪ್ಪದೆ ವ್ಯಾಯಾಮ ಮಾಡುತ್ತಾರೆ. ಓಲಿಂಪಿಕ್ ಪಂದ್ಯಾಟದ ಬಗ್ಗೆ ಮಾತನಾಡುವಾಗ ತಮ್ಮ ಅನುಭವವನ್ನೂ, ವಿಚಾರಗಳನ್ನೂ ನಮ್ಮೆದುರು ಇಟ್ಟಿದ್ದಾರೆ. ಅಂತೆಯೇ ಆಟಪಾಟದ ಬಗ್ಗೆ ಮಾತಾಡಲು ರಾಯರಿಗೆ ಅಧಿಕಾರವಾಣಿ ಇದೆ.

ಸಂಗೀತ, ಚಿತ್ರ-ಕಲೆ ಇವುಗಳ ನಿಸ್ಸೀಮ ಭಕ್ತರು ರಾಯರು. ಸಂಗೀತವನ್ನು ಕೇಳಿ ರಾಯರ ಹೃದಯ ಒಲಿದಿದೆ. ಚಿತ್ರ-ಕಲೆಗಳನ್ನು ನೋಡಿ ರಾಯರ ಮನ ತಣಿದಿದೆ. ಇದರ ಜೊತೆಗೆ ಆಳವಾಗಿ ಅಗಿದು, ಅಗಿದು ನೋಡಿ ಸಂಗೀತವನ್ನು ತಿಳಿದುಕೊಳ್ಳುವ ಇವರ ಸ್ವಭಾವ. ಇವೆಲ್ಲ ಗುಣಗಳಿಂದ ರಾಯರು ಸಂಗೀತ, ಚಿತ್ರಕಲೆ ಇವುಗಳ ಬಗ್ಗೆ ಅಧಿಕಾರದಿಂದ ಮಾತನಾಡಬಲ್ಲರು.

ಹೀಗೆ ಉಪಯುಕ್ತವಾದ ಪ್ರತಿ ವಿಷಯದಲ್ಲಿಯೂ ರಾಯರಿಗೆ ಅಭಿರುಚಿ, ಆಸಕ್ತಿ. ರಾಯರು ಕೇವಲ ಮಾತುಗಾರರಲ್ಲ. ಹಲವು ಸಂಸ್ಥೆಗಳಿಗೆ ನೆರವು ನೀಡಿದ್ದಾರೆ. ಟೊಂಕಕಟ್ಟಿ ಕೆಲಸ ಮಾಡಿದ್ದಾರೆ. ಹುಕ್ಕೇರಿಯಲ್ಲಿ ಕ್ಷಯ ಮುಂತಾದ ಕೆಟ್ಟ ಬೇನೆಗಳಿಗೆ ಚಿಕಿತ್ಸೆ ಮಾಡುತ್ತಿರುವ ದವಾಖಾನೆಯನ್ನು ನಡೆಸುವ ಸಂಸ್ಥೆಯಾದ ಕರ್ನಾಟಕ ಹೆಲ್ಥ ಇನ್ಸ್ಟಿಟ್ಯೂಟಕ್ಕೆ ರಾಯರೇ ಅಧ್ಯಕ್ಷರು. ಐನಾಪುರವು ಇವರ ಊರು. ಅಥಣಿಯು ಇವರು ಕಲಿತು ಬೆಳೆದ ಪಟ್ಟಣ. ಇವೆರಡೂ ಸ್ಥಳಗಳಲ್ಲಿ

ಹೈಸ್ಕೂಲುಗಳಿರುತ್ತವೆ. ಈ ಹೈಸ್ಕೂಲುಗಳನ್ನು ನಡಸುವ ಎರಡೂ ಸಂಸ್ಥೆಗಳಿಗೆ ನ್ಯಾಯಮೂರ್ತಿಗಳೇ ಅಧ್ಯಕ್ಷರು. ಬೆಳಗಾವಿಯ ಲಾ ಸೊಸಾಯಿಟಿಗೆ ಬಹುಕಾಲ ಇವರು ಅಧ್ಯಕ್ಷರಾಗಿದ್ದರು. ಆ ಸಂಸ್ಥೆಯಿಂದ ಈಗ ಒಂದು ಲಾ ಕಾಲೇಜು ನಡೆಯುತ್ತಿದೆ. ಈ ಕಾಲೇಜು ಸ್ಥಾಪನೆಯ ವಿಚಾರ ರಾಯರದೇ. ಈ ವಿಚಾರ ಕಾರ್ಯರೂಪಕ್ಕೆ ಬರುವಾಗ ರಾಯರು ತುಂಬ ನೆರವು ನೀಡಿದ್ದಾರೆ. ಮುಂಬಯಿ ಕರ್ನಾಟಕ ಸಂಘದ ಅಧ್ಯಕ್ಷರಾಗಿ ಇವರು ಮಾಡಿದ ಕಾರ್ಯವು ಅಜರಾಮರವಾಗಿ ನಿಂತಿದೆ. ಮುಂಬಯಿಯಲ್ಲಿಯ ಎಲ್ಲ ಕನ್ನಡಿಗರಲ್ಲಿ, ಕನ್ನಡ ಸಂಸ್ಥೆಗಳಲ್ಲಿ ಐಕ್ಯವನ್ನುಂಟುಮಾಡುವ ಉದ್ದೇಶದಿಂದ ಸ್ಥಾಪಿತವಾದ 'ಮುಂಬಯಿ ಸಂಯುಕ್ತ ಕರ್ನಾಟಕ ಸಂಘ'ಕ್ಕೂ ನ್ಯಾಯಮೂರ್ತಿಗಳೇ ಅಧ್ಯಕ್ಷರು. ಉಡಿಪಿಯ ಮಧ್ವಮುನಿ ಸೇವಾ ಸಂಘ ಹಾಗು 'ಮಧ್ವಸಿದ್ಧಾಂತ ಅಭಿವೃದ್ಧಿಕಾರಿಣಿ' ಸಭೆಗಳಿಗೆ ಕೆಲ ಕಾಲ ನ್ಯಾಯಮೂರ್ತಿಗಳೇ ಅಧ್ಯಕ್ಷರಾಗಿ ಕೆಲಸಮಾಡಿದರು. ಸಂಸ್ಥೆಗಳಲ್ಲಿ ಹೊಂದಿಕೊಂಡು ಯೋಗ್ಯ ಹಾದಿಯನ್ನು ತೋರಿ ಅವುಗಳನ್ನು ಬೆಳೆಸಲು ನ್ಯಾಯಮೂರ್ತಿಗಳು ಎಂದೂ ಹಿಂತೆಗೆಯುವದಿಲ್ಲ. ವಿಧಾಯಕ ಕಾರ್ಯಕ್ರಮಗಳಲ್ಲಿ ಎಷ್ಟು ಭಾಗವಹಿಸಿದರೂ ಇವರಿಗೆ ಬೇಸರವಿಲ್ಲ, ಜುಗುಪ್ಸೆ ಇಲ್ಲ. ಜನಸಾಮಾನ್ಯರ ಸೇವೆ ಮಾಡಬೇಕೆಂಬ ಹಂಬಲವೇ ನ್ಯಾಯಮೂರ್ತಿಗಳಿಂದ ಈ ಕಾರ್ಯಗಳನ್ನು ಮಾಡಿಸುತ್ತಿರುವದು.

ನ್ಯಾಯಮೂರ್ತಿಗಳದು ಬಿಚ್ಚು ಮನಸ್ಸು, ತಾವು ಮನಗಂಡುದುದನ್ನು ಮರೆಮಾಜದೆ ಹೇಳುತ್ತಾರೆ. 'ಬ್ರಾಹ್ಮಣರು ಸಮುದ್ರಯಾನ ಮಾಡಬಾರದೆಂದು ಶಾಸ್ತ್ರವು ಹೇಳುತ್ತಿದೆ. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು?' ಎಂದು ಒಮ್ಮೆ ಅವರನ್ನು ಕೇಳಿದೆ. 'ವರ್ಣಾಶ್ರಮ ಧರ್ಮಗಳ ಕಾಲ ಈಗ ಬದಲಾಗಿದೆ. ಪರಿಸ್ಥಿತಿ ಪಲ್ಲಟಿಸಿದೆ. ಅದಕ್ಕೆ ತಕ್ಕಂತೆ ನಾವೂ ನಡೆಯಬೇಕು. ನನ್ನ ತಮ್ಮ ಅಮೇರಿಕೆಗೆ ಹೋಗಿದ್ದಾನೆ. ನನ್ನ ಮಕ್ಕಳು ವಿದೇಶಕ್ಕೆ ಹೋಗಬಹುದು. ವಿದೇಶಕ್ಕೆ ಹೋಗುವದು ಶಿಕ್ಷಣ ಪಡೆಯುವದಕ್ಕಾಗಿ, ಜ್ಞಾನವನ್ನು

ಸಂಪಾದಿಸುವದಕ್ಕಾಗಿ. ಈ ಜ್ಞಾನ, ಶಿಕ್ಷಣಗಳನ್ನು ಪಡೆಯದಿದ್ದರೆ ನಾವು ಹಿಂದುಳಿಯುವೆವು. ಅನ್ಯರನ್ನು ಸರಿಗಟ್ಟಲಾರೆವು'. 'ಆಚಾರ್ಯ ತ್ರಯರ ಮತಗಳಲ್ಲಿ ಯಾವದು ಹೆಚ್ಚಿನದು?' ಎಂದು ಮತ್ತೊಂದು ಪ್ರಶ್ನೆ ಕೇಳಿದೆ. ಇದಕ್ಕೆ ಮೊದ ಮೊದಲು ಅವರು ಉತ್ತರ ಕೊಡಲು ಇಷ್ಟಪಡಲಿಲ್ಲ. ನಾನು ಅಷ್ಟಕ್ಕೆ ಬಿಡಲಿಲ್ಲ. ಅಲ್ಲಿಂದ ತಮ್ಮ ಅಭಿಪ್ರಾಯ ಹೇಳಿದರು. 'ಶ್ರೀ ಮಧ್ವಾಚಾರ್ಯರ ದ್ವೈತಮತವು ತರ್ಕ ಸಮ್ಮತವಿದೆ. ಅದ್ವೈತಿಗಳ ಮಾಯಾವಾದ ನನಗೊಂದು ಮಾಯೆಯಾಗಿದೆ. ನಾನು ಕೇವಲ ಮಾಧ್ವನಿರುತ್ತೇನೆಂದು ಹೀಗೆ ಹೇಳುವದಿಲ್ಲ.' ನ್ಯಾಯಮೂರ್ತಿಗಳದು ಯಾವಾಗಲೂ ನ್ಯಾಯದೃಷ್ಟಿ; ನಿಷ್ಪಕ್ಷಪಾತತನ. ಧಾರ್ಮಿಕ ಆಡಂಬರವು ಇವರಿಗೆ ಸೇರದು. ಆದರೆ ಧರ್ಮದಲ್ಲಿ ಧಾರಾಳವಾದ ಶ್ರದ್ಧೆ, ವಿಶ್ವಾಸ.

## ಮುಂದಿನ ಕಾರ್ಯದ ರೂಪರೇಷೆ.

ನ್ಯಾಯಮೂರ್ತಿಗಳು ಸದ್ಯ ಕೊಲ್ಹಾಪುರದ ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಾಗಿದ್ದಾರೆ. ದಕ್ಷಿಣ ಸಂಸ್ಥಾನಗಳಲ್ಲಿ ಕನ್ನಡಿಗರಿಗೆ, ಕನ್ನಡಕ್ಕೆ ಅನೇಕ ವರ್ಷಗಳಿಂದ ಹೇಳಲಾರದಷ್ಟು ಅನ್ಯಾಯವಾಗುತ್ತ ಬಂದಿದೆ. ಅಲ್ಲಿಯ ಕನ್ನಡಿಗರ ದೃಷ್ಟಿಕೋನ ಬದಲಾಗಬೇಕಾಗಿದೆ. ಕನ್ನಡಕ್ಕೆ ತಕ್ಕ ಮನ್ನಣೆ ದೊರೆಯಬೇಕಾಗಿದೆ. ಅವರಲ್ಲಿ ಸಂಘಟನೆಯಾಗಬೇಕಾಗಿದೆ. ಒಂದು ಕಾಲಕ್ಕೆ ಕರ್ನಾಟಕದ ಒಳನಾಡಾದ ಈ ಸಂಸ್ಥಾನಗಳು ಈಗ ಕರ್ನಾಟಕದ ಗಡಿಗಳಲ್ಲಿ ಬಿದ್ದಿವೆ. ಈ ಗಡಿಗಳನ್ನು ಗಟ್ಟಿಮಾಡಿ ಅವು ಹೊರನಾಡಾಗದಂತೆ ನೋಡಿಕೊಳ್ಳಬೇಕಾಗಿದೆ. ಹೊಸ ಹೈಕೋರ್ಟನ್ನು ಭದ್ರವಾಗಿ ಕಟ್ಟಿ ಸಂಸ್ಥಾನದ ಪ್ರಜೆಗಳಿಗೆ ಒಳ್ಳೆ ರೀತಿಯಲ್ಲಿ ನ್ಯಾಯ ದೊರಕುವ ಹಾಗೆ ಮಾಡುವ ಮಹತ್ಕಾರ್ಯವನ್ನು ರಾಯರು ಮಾಡಬೇಕಾಗಿದೆ. ಈ ಕೆಲಸ ಸಾಧನೆಗೆ ಬೇಕಾದ ಎಲ್ಲ ಗುಣಗಳು ರಾಯರಲ್ಲಿವೆ.

ಕರ್ನಾಟಕಕ್ಕೊಂದು ಸ್ವತಂತ್ರ ವಿಶ್ವವಿದ್ಯಾಲಯ ಬೇಕೆಂಬ ಕನ್ನಡಿಗರ ಕೂಗಿಗೆ ಈಗ ಸರಕಾರವು ಕಿವಿಗೊಟ್ಟಿದೆ. ವಿಶ್ವವಿದ್ಯಾಲಯ

ಪರಿಶೀಲಕರ ಸಮಿತಿಯೊಂದು ನೇಮಕವಾಗಿದೆ. ಈ ಸಮಿತಿಯ ಚೇರಮನ್ನರೆಂದು ಸರಕಾರವು ನ್ಯಾಯಮೂರ್ತಿಗಳನ್ನು ಯೋಜಿಸಿದೆ. ನ್ಯಾಯಮೂರ್ತಿಗಳ ಅನುಭವ ವಿಶಾಲವಾದದ್ದು; ಬುದ್ಧಿ ಚುರುಕಾದದ್ದು; ಕರ್ತೃತ್ವಶಕ್ತಿ ಹೆಸರು ಪಡೆದದ್ದು. ನ್ಯಾಯಮೂರ್ತಿಗಳ ನೇತೃತ್ವದಲ್ಲಿ ಈ ಕನ್ನಡ ವಿಶ್ವ ವಿದ್ಯಾಲಯವನ್ನು ಕಟ್ಟುವ ದೊಡ್ಡ ಕಾರ್ಯವು ಯಶಸ್ವಿಯಾಗುವದೆಂದು ಕನ್ನಡಿಗರಿಗೆಲ್ಲ ಪೂರ್ಣ ಭರವಸೆಯಿದೆ. ಈ ವಿಶ್ವ ವಿದ್ಯಾಲಯವು ಸ್ಥಾಪಿತವಾಗಿ ನ್ಯಾಯಮೂರ್ತಿಗಳೇ ಅದರ ಮೊದಲ ವಾಯಿಸ ಚಾನ್ಸಲರರಾಗಬೇಕೆಂಬದು ಪ್ರತಿಯೊಬ್ಬ ಕನ್ನಡಿಗನ ಇಚ್ಛೆ. ಈ ಕೆಲಸವು ಈಡೇರಿ ಏಕೀಕೃತ ಕನ್ನಡ ನಾಡಿನ ಮಹಾದ್ವಾರವು ಈ ಕರ್ನಾಟಕ ವಿಶ್ವವಿದ್ಯಾಲಯದ ರೂಪದಿಂದ ನಮ್ಮ ಕಣ್ಣಿಗೆ ತೀವ್ರವೇ ಬೀಳಲಿ.

x x x x

ನ್ಯಾಯಮೂರ್ತಿಗಳ ಚರಿತ್ರೆಯನ್ನು ನಾನು ಬರೆಯುತ್ತೇನೆಂದು ನನ್ನ ನಚ್ಚಿನ ಗೆಳೆಯರೊಬ್ಬರು ಒಮ್ಮೆ ಒಂದು ಸಭೆಯಲ್ಲಿ ಹೇಳಿದರು. ಅದನ್ನು ಕೇಳಿ ನನಗೆ ತುಂಬ ಆಶ್ಚರ್ಯವಾಯಿತು. 'ಹೀಗೇಕೆ ಹೇಳಿದಿರಿ' ಎಂದು ಅವರನ್ನು ಕೇಳಲಾಗಿ 'ನನ್ನ ಒಳದನಿ (Inner voice) ನನಗೆ ಹಾಗೆ ಹೇಳಿತು' ಅಂದರು. ಅಂದು ಅವರು ಹೇಳಿದ ಭವಿಷ್ಯ ಇಂದು ಸತ್ಯವಾಗುತ್ತಿದೆ. ನನ್ನ ಲೆಕ್ಕಣಿಕೆಯ ಶಕ್ತಿ ನನಗೆ ಗೊತ್ತಿದೆ. ನ್ಯಾಯಮೂರ್ತಿಗಳ ಪರಿಚಯವನ್ನು ಮಾಡಿಕೊಡುವ ಯೋಗ್ಯತೆ ನನ್ನಲ್ಲಿದೆ ಎಂದು ನಾನು ಈ ಕೆಲಸ ಕೈಕೊಂಡಿಲ್ಲ. ಈಗ ಐದು ವರುಷಗಳಲ್ಲಿ ಅವರ ಕೂಡ ಆಡಿದ ಮಾತು, ಮಾಡಿದ ಚರ್ಚೆಗಳೇ ನನ್ನನ್ನು ಈ ಕೆಲಸಕ್ಕೆ ಹುರಿದುಂಬಿಸಿವೆ. ನ್ಯಾಯಮೂರ್ತಿಗಳ ಯೋಗ್ಯತೆ ದೊಡ್ಡದು. ಈ ಚಿಕ್ಕ ಹೊತ್ತಿಗೆಯ ಮೊದಲನೇ ಭಾಗದಲ್ಲಿ ಲೇಖಕರು ಪರಿಚಯದ ಬಹುಭಾಗವನ್ನು ತಮ್ಮ ರಸವಾಣಿಯಿಂದ ಮಾಡಿದ್ದಾರೆ. ಉಳಿದ ಕೆಲಭಾಗವನ್ನು ನಾನು ಮುಗಿಸಿದ್ದೇನೆ. ನನ್ನ ಪರಿಚಯವು ಪರಿಪೂರ್ಣವಾಗಿರದಿದ್ದರೆ ನಾ [illegible] ಾವ ಕುಂದೂ ಬರಲಾರದಷ್ಟೇ?



